

# ಶ್ರೀರಘೂತ್ತಮತೀರ್ಥರು

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)
ಬೆಂಗಳೂರು




# ಶ್ರೀರಘೂತ್ತಮ ತೀರ್ಥರು

(ಶ್ರೀರಘೂತ್ತಮತೀರ್ಥರ ಜೀವನ ಹಾಗೂ ಕೃತಿಗಳ ಪರಿಚಯ)

(ಶ್ರೀರಘೂತ್ತಮತೀರ್ಥರ ತಾರತಮ್ಯಸ್ತೋತ್ರ, ತಿಥಿತ್ರಯವಿನಿರ್ಣಯ ಕೃತಿಗಳು,
ಅವರ ಗ್ರಂಥಗಳ ಆದ್ಯಂತಶ್ಲೋಕಗಳು ಹಾಗೂ
ಅವರನ್ನು ಕುರಿತ ಸ್ತೋತ್ರಗಳ ಸಮೇತ)


ಲೇಖನ ಹಾಗೂ ಸಂಪಾದನೆ :

**ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ**



ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

**ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ**

'ಪಾಜಕ', ೮೯/೨೪, ೩ನೇ ಅಡ್ಡರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,
ಹನುಮಂತನಗರ, ಬೆಂಗಳೂರು - ೫೬೦ ೦೧೯.

**Sri Raghoottamatirtharu** : Edited with an introduction, translation and explanatory notes by Vidyāvācaspati, Darśana- ratnam, Prava-canācārya, Sacchāstra-vicakṣaṇaratnam, Śāstrapravacana-kesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍita-ratnam, Vidyāvāridhi, Sacchāstra-pravacanapravīṇa, Gītāratnākara, Tattva-vācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002**, **Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005**) **Dr.Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna** Pājaka, No.89/24, Third Cross, Mount Joy Extension, Hanumanthanagar, Bangalore - 560019. Pages: 64 (iv + 60)

Phone : 26602802; 26611011.

Internet : www.vyasamadhwa.org

E-mail : info@vyasamadhwa.org



**SRI RAGHOOTTAMA TIRTHARU**
**ISBN : 978-93-81826-10-2**

First Edition : 2005
Second Edition : 2008
Third Edition : 2013

Typeset by :
**Śrī Vyāsa Madhva Samśodhana Pratiṣṭhāna(Regd)**

Printed at :
**Vāgartha,** N.R. Colony, Bangalore, Ph: 22427677

# ವಿಷಯಾನುಕ್ರಮಣಿಕೆ



★★★★★

# ಮುನ್ನುಡಿ

ಶ್ರೀರಘೂತ್ತಮತೀರ್ಥ (ಕ್ರಿ.ಶ.೧೫೫೭-೧೫೯೭)ರು ವೈಷ್ಣವವೇದಾಂತದ ರಸಋಷಿಗಳಲ್ಲೊಬ್ಬರು. ಶಾಸ್ತ್ರವೈದುಷ್ಯ, ಪಾಠಪ್ರವಚನ ಹಾಗೂ ತಪಃಸಿದ್ಧಿಗಳ ತ್ರಿವೇಣೀಸಂಗಮವೆಂಬುದು ಇವರ ವ್ಯಕ್ತಿತ್ವದ ವಿಶೇಷ. ಶ್ರೀರಘುವರ್ಯತೀರ್ಥರಂತಹ ಮಹನೀಯರ ಶಿಷ್ಯರಾಗಿ, ಶ್ರೀವೇದವ್ಯಾಸತೀರ್ಥರಂತಹ ಮಹಾತಪಸ್ವಿಗಳ ಗುರುಗಳಾಗಿ ಇವರು ಗಳಿಸಿರುವ ಮಾನ್ಯತೆ ಅಪೂರ್ವವಾದುದು. ಮಧ್ವಸಿದ್ಧಾಂತದ ಗ್ರಂಥಕಾರರಾಗಿ ಇವರ ಸ್ಥಾನ ಅಗ್ರಶ್ರೇಣಿಯದು. ಟಿಪ್ಪಣೀಕಾರರ ಪರಂಪರೆಯನ್ನೇ ನಿರ್ಮಿಸಿದ ವಿದ್ವಚ್ಛಿರೋಮಣಿಗಳು ಎಂಬುದು ಇವರ ಪ್ರಶಸ್ತಿ. ಉತ್ತರಾದಿಮಠದ ಗುರುಪರಂಪರೆಯಲ್ಲಂತೂ ಇವರ ಸ್ಥಾನ ಅನುಪಮವಾದುದು. ಮುನಿತ್ರಯರೆನ್ನಿಸಿದ ಶ್ರೀಮಧ್ವಾಚಾರ್ಯರು (ಕ್ರಿ.ಶ.೧೨೦೦-೧೨೭೯), ಶ್ರೀಜಯತೀರ್ಥರು ಮತ್ತು ಶ್ರೀವ್ಯಾಸರಾಜರು, ಹಾಗೂ ಶ್ರೀಶ್ರೀಪಾದರಾಜರು ಹಾಗೂ ಶ್ರೀವಾದಿರಾಜರ ಅನಂತರದ ಒಬ್ಬ ಮಹಾವಿಭೂತಿಗಳು ಎಂಬುದು ಇವರ ಹಿರಿಮೆ. ಸೋದೆಯ ಶ್ರೀವಾದಿರಾಜಸ್ವಾಮಿಗಳಂತೆ, ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳಂತೆ, ತಿರುಕ್ಕೋಯಿಲೂರಿನ ಶ್ರೀರಘೂತ್ತಮಸ್ವಾಮಿಗಳು ಕಲಿಯುಗದ ಕಲ್ಪವೃಕ್ಷ, ಕಾಮಧೇನುವೆಂದು ಖ್ಯಾತರಾಗಿರುವರು. ಈ ಮೂವರಲ್ಲಿ ಮೊದಲು ವೃಂದಾವನಪ್ರವೇಶ ಮಾಡಿದವರು ಇವರೇ. ಇವರ ವೃಂದಾವನದ ಬಳಿಯೇ ಇವರಲ್ಲಿ ವಿಶೇಷ ಆದರ ಹೊಂದಿದ್ದ, ಇತ್ತೀಚಿನ ಮಹಾವಿದ್ವಾಂಸರೆನ್ನಿಸಿದ್ದ ಶ್ರೀಸತ್ಯಪ್ರಮೋದತೀರ್ಥರ ಮೂಲಬೃಂದಾವನವೂ ಇದೆ.

ಇವರ ಬಗ್ಗೆ ಗುರುಚರ್ಯಾ, ಶ್ರೀಸತ್ಯಬೋಧತೀರ್ಥರ ಶಿಷ್ಯರಾದ ದೈವಜ್ಞಭೀಮಾಚಾರ್ಯರ ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು, ಶ್ರೀನಿವಾಸಕವಿಗಳ ಶ್ರೀಸತ್ಯನಿಧಿವಿಲಾಸ ಮೊದಲಾದ ಕೃತಿಗಳಲ್ಲಿ ಅನೇಕ ವಿವರಗಳು ದೊರೆಯುತ್ತವೆ. ಅವುಗಳನ್ನು ಆಧರಿಸಿ, ಪ್ರಸ್ತುತ ಕೃತಿ ಸಿದ್ಧವಾಗಿದೆ. ಪರಿಶಿಷ್ಟದಲ್ಲಿ ಆಕರಸಾಮಗ್ರಿಯೊಂದಿಗೆ ಅವರ ಗ್ರಂಥಗಳ ಆದ್ಯಂತಶ್ಲೋಕಗಳು, ಅವರನ್ನು ಕುರಿತ ಸ್ತೋತ್ರಗಳನ್ನು ಅಳವಡಿಸಲಾಗಿದೆ. ನನ್ನ ಹಸ್ತಪ್ರತಿಸಂಗ್ರಹ (ಶ್ರೀಜಯತೀರ್ಥ ಸಂಸ್ಕೃತಹಸ್ತಲಿಖಿತಗ್ರಂಥಾಲಯ ವ್ಯಾಸನಕೆರೆ)ದಲ್ಲಿ ದೊರೆತಿರುವ ಅವರ ತಾರತಮ್ಯಸ್ತೋತ್ರ ಹಾಗೂ ತಿಥಿತ್ರಯವಿನಿರ್ಣಯ ಕೃತಿಗಳು ಇಲ್ಲಿ ಮೊದಲ ಬಾರಿಗೆ ಪ್ರಕಾಶಿತವಾಗುತ್ತಿವೆ. ಅಂತೂ ಶ್ರೀರಘೂತ್ತಮರ ಬಗ್ಗೆ ಅನೇಕವಿವರಗಳು ಮೊದಲಬಾರಿಗೆ ಒಂದೆಡೆ ಸಿಗುವಂತಾಗಿವೆ ಎಂಬುದು ಈ ಕೃತಿಯ ವೈಶಿಷ್ಟ್ಯ.

ಇದು ಮೂರನೆಯ ಆವೃತ್ತಿ. ಇದರ ಮೊದಲನೆಯ ಆವೃತ್ತಿಯ ಪ್ರಕಾಶನಕ್ಕೆ ಪ್ರಾಯೋಜಕರಾಗಿದ್ದ ಶ್ರೀಹರಿಗುರುಭಕ್ತರಾದ ಶ್ರೀಚತುರ್ವೇದಿ ಆನಂದರಾವ್ ಅವರು ಈ ಆವೃತ್ತಿಗೂ ಯಥಾಶಕ್ತಿ ಸೇವೆಸಲ್ಲಿಸಿರುವರು. ಕರಡು ತಿದ್ದುವ ಕಾರ್ಯ ನನ್ನ ಪುತ್ರ ಚಿ॥ ಜಯಂತನದು. ಮುದ್ರಣ ವಾಗರ್ಥ ಅವರದು. ಇವರಿಗೆ ನಮ್ಮ ಪ್ರಕಾಶನ ಋಣಿ.

ಬೆಂಗಳೂರು ವ್ಯಾಸನಕೆರೆ ಪ್ರಭಂಜನಾಚಾರ್ಯ

ನಂದನ - ಪುಷ್ಯಶುಕ್ಲದಶಮೀ(೨೧.೦೧.೨೦೧೩)

॥ ಶ್ರೀಃ ॥

# ಶ್ರೀರಘೂತ್ತಮ ತೀರ್ಥರು

ದ್ವೈತವೇದಾಂತದ ಇತಿಹಾಸದಲ್ಲಿ ಬೆಳಗಿದ ಮಹಾಪುರುಷರಲ್ಲಿ ಶ್ರೀರಘೂತ್ತಮ ತೀರ್ಥರು (ಕ್ರಿ.ಶ.೧೫೫೭-೧೫೯೬) ಒಬ್ಬರು. ಶ್ರೀಮದುತ್ತರಾದಿ ಮಠದ ಗುರು-ಪರಂಪರೆಯಲ್ಲಿ ಇವರ ಸ್ಥಾನ ಅಗ್ರಮಾನ್ಯವಾದುದು. ಪಾಠಪ್ರವಚನ, ಗ್ರಂಥರಚನೆ ಹಾಗೂ ತಪಃಶಕ್ತಿಗಳ ತ್ರಿವೇಣೀಸಂಗಮದ ಉಜ್ಜ್ವಲವ್ಯಕ್ತಿತ್ವ ಇವರದು. ಶ್ರೀಮಧ್ವಸಿದ್ಧಾಂತದ ಅಗ್ರಶ್ರೇಣಿಯ ಪ್ರಸಾರಕರೆಂಬುದು ಇವರ ವೈಶಿಷ್ಟ್ಯ.

## ಶ್ರೀರಘುವರ್ಯ ತೀರ್ಥರು

ಶ್ರೀರಘೂತ್ತಮತೀರ್ಥರು ಶ್ರೀರಘುವರ್ಯತೀರ್ಥರ ಶಿಷ್ಯರು. ಶ್ರೀರಘುವರ್ಯ-ತೀರ್ಥರು ೫೫ ವರ್ಷಗಳಷ್ಟು ದೀರ್ಘಕಾಲ ಪೀಠವನ್ನು ಪಾಲಿಸಿದ ಮಹನೀಯರು. ಇಂದಿಗೂ ಉತ್ತರಾದಿಮಠದ ಪರಂಪರೆಯಲ್ಲಿ ಇವರದೇ ದಾಖಲೆಯ ಅವಧಿಯ ಪೀಠಾಧಿಪತ್ಯ. ಶ್ರೀರಘುನಾಥತೀರ್ಥರ ಶಿಷ್ಯರಾಗಿ, ಶ್ರೀವ್ಯಾಸರಾಜರು ಶ್ರೀವಾದಿರಾಜರಂತಹ ವಿದ್ವದ್ವಿಭೂತಿಗಳ ಸಮಕಾಲಿಕರಾಗಿ, ಶ್ರೀರಘುವರ್ಯತೀರ್ಥರದು ಅಪೂರ್ವಸಾಧನೆ. ಅವರೊಮ್ಮೆ ಭೀಮಾತೀರದ ಮಣೂರಿನಲ್ಲಿ ನೆಲೆಸಿದ್ದಾಗ, ವಿಧರ್ಮೀಯರ ಆಕ್ರಮಣ ನಡೆಯಿತು. ಮಠದ ಸಿಬ್ಬಂದಿ ದೇವರೊಂದಿಗೆ ಗುರುಗಳನ್ನೂ ಬಿಟ್ಟು ದಿಕ್ಕೆಟ್ಟು ಓಡಿತು. ಅಪಾರಸಂಖ್ಯೆಯ ಶತ್ರುಸೈನ್ಯ ಶ್ರೀರಘುವರ್ಯತೀರ್ಥರನ್ನು ಆಕ್ರಮಿಸಲು ಧಾವಿಸಿತು. ಶ್ರೀರಘುವರ್ಯತೀರ್ಥರದು ಅಪಾರಭಗವನ್ನಿಷ್ಠೆ. ಶಾಸ್ತ್ರಪಾಂಡಿತ್ಯವಂತೂ ಅದ್ಭುತ ! ಅದರಿಂದಾಗಿಯೇ ಅವರಿಗೆ ಅಂತಹ ಪ್ರಸಂಗದಲ್ಲೂ ಅಂಜಿಕೆ ಎನ್ನಿಸಲಿಲ್ಲ. ಅಂತಹ 'ಅಭಯ' ದೈವೀಸಂಪತ್ತಿನ ಪ್ರಥಮಲಕ್ಷಣವಾಗಿ ಭಗವದ್ಗೀತೆಯಲ್ಲಿ ನಿರೂಪಿತವಾಗಿದೆ.

ಅವರು ದೇವರಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತು, ಭೀಮಾನದಿಯತ್ತ ಸಾಗಿದರು. ಹಿಂದೆ ಶತ್ರುಸೈನ್ಯದ ಪ್ರವಾಹ; ಮುಂದೆ ಭೀಮಾನದಿಯ ಪ್ರವಾಹ. ಅವರ ಮನಸ್ಸಿನಲ್ಲಂತೂ ಭಗವದ್ಭಕ್ತಿಯ ಮಹಾಪ್ರವಾಹ. ಅವರು ಭೀಮಾನದಿಯ ಪ್ರವಾಹದಲ್ಲಿ ದೇವರಪೆಟ್ಟಿಗೆ-ಯನ್ನು ಹೊತ್ತೇ ನುಗ್ಗಿದರು. ಅವರ ಮನಸ್ಸಿನಲ್ಲಿ ಕೈಯಲ್ಲಿ ಕೃಷ್ಣನನ್ನು ಹಿಡಿದು, ಯಮುನೆಯ ಪ್ರವಾಹದಲ್ಲಿ ನುಗ್ಗಿದ ವಸುದೇವನ ಚಿತ್ರ ಬಂದಿರಬೇಕು. ಅಲ್ಲಿ ನಡೆದಂತೆ ಇಲ್ಲಿಯೂ ನಡೆಯಿತು. ಅವರ ಪಾಲಿಗೆ ಭೀಮೆಯ ತುಂಬುಪ್ರವಾಹ ಕಾಲುಹೊಳೆ ಎನ್ನಿಸಿತು. ಒಬ್ಬರು ಸಾಗುವಷ್ಟು ಮಾರ್ಗವನ್ನು ಭೀಮಾನದಿ ನೀಡಿತ್ತು. ಶತ್ರುಗಳು ನೋಡುತ್ತಿದ್ದಂತೆಯೇ ಅವರು ಆಚೆಯ ದಡ ಸೇರಿಯಾಗಿತ್ತು. ಶ್ರೀಕೃಷ್ಣನನ್ನು ಕೈಯಲ್ಲಿ ಹಿಡಿದಿದ್ದ ವಸುದೇವನಂತೆ, ಶ್ರೀರಾಮನನ್ನು ಕೈಯಲ್ಲಿ ಹಿಡಿದಿದ್ದ ಇವರು ಸುರಕ್ಷಿತರಾಗಿದ್ದರು. ಅದನ್ನು ನೋಡಿದ ಶತ್ರುಸೈನಿಕರು ಅವರನ್ನು ಹಿಡಿಯಲೆಂದು ತಾವೂ ಪ್ರವಾಹದಲ್ಲಿ ನುಗ್ಗಿದರು. ಆದರೆ ಅವರೆಲ್ಲ ಇವರಂತೆ ದಾಟುವ ಬದಲು, ಪ್ರವಾಹದಲ್ಲೇ ಕೊಚ್ಚಿಹೋಗಿದ್ದು ಅವರ ದೈವದ್ರೋಹ

ಗುರುದ್ರೋಹಗಳ ಫಲಶ್ರುತಿಯಾಯಿತು. ಶ್ರೀರಘುವರ್ಯರು ಮಠವನ್ನು ಮಾತ್ರವಲ್ಲದೆ, ಮಣೂರುಪ್ರಾಂತವನ್ನೇ ಆ ಮೂಲಕ ಸಂರಕ್ಷಿಸಿದ್ದರು. ಅದು ಅವರ ತಪಃಶಕ್ತಿಯೊಂದಿಗೆ ಆರ್ತಸಂರಕ್ಷಣೆಯ ಅನುಗ್ರಹಬುದ್ಧಿಗೂ ನಿದರ್ಶನವಾಯಿತು. ಪೂರ್ವಭೀಮರಾದ ಶ್ರೀಮಧ್ವರ ಸಂದೇಶ ಅವರಿಗೆ ಭೀಮಾನದಿಯ ಪ್ರವಾಹವನ್ನು ದಾಟುವ ಸ್ಫೂರ್ತಿ ನೀಡಿತ್ತು. ಯವನಸೈನಿಕರನ್ನು ಎದುರಿಸಿ, ಗಂಗೆ ದಾಟಿದ ಮೂಲಗುರು ಶ್ರೀಮಧ್ವರ ಪರಂಪರೆಯ ಆ ಯತಿವರ್ಯರು ಈ ಯವನಸೈನಿಕರನ್ನು ಹಾಗೆ ಹಿಮ್ಮೆಟ್ಟಿಸಿದ್ದರು.[೧] ಇಂತಹ ತಪಃಶಕ್ತಿಯ ಯೋಗಿವರೇಣ್ಯರಾದ ಶ್ರೀರಘುವರ್ಯರು ಶ್ರೀರಘೂತ್ತಮರಂತಹ ಯತಿಶೇಖರರನ್ನು ಸಮಾಜಕ್ಕೆ ನೀಡಿದರು.

## ಶ್ರೀರಘೂತ್ತಮತೀರ್ಥರು

ಶ್ರೀರಘುವರ್ಯರು ಸಂಚಾರಕ್ರಮೇಣ ಒಮ್ಮೆ ಮಹಾರಾಷ್ಟ್ರದ ಕೊಲ್ಲಾಪುರ ಹಾಗೂ ಸಾತಾರ ಮಾರ್ಗದಲ್ಲಿರುವ ಸ್ವರ್ಣವಾಟ(ಸುವರ್ಣಗಡ)ವೆಂಬ ಗ್ರಾಮಕ್ಕೆ ತೆರಳಿದ್ದರು. ಅದು ಅವರ ಪೂರ್ವಾಶ್ರಮದ ಸಹೋದರಿಯ ವಾಸಸ್ಥಳವೂ ಆಗಿತ್ತು. ಗಂಗಾಬಾಯಿ (ಲಕ್ಷ್ಮೀಬಾಯಿ ಎಂದೂ ಪ್ರತೀತಿ) ಅವರ ಸಹೋದರಿಯ ಹೆಸರಾಗಿದ್ದರೆ, ಸುಬ್ಬಾಭಟ್ಟ (ವಿಟ್ಠಲಾಚಾರ್ಯ ಎಂದೂ ಪ್ರತೀತಿ) ಆಕೆಯ ಪತಿಯ ಹೆಸರಾಗಿತ್ತು. ಅವರದು ಅನು-

---

೧. ಅಥ ರಘುವರ್ಯ- ತೀರ್ಥಯತಿರಾಟ್ ಸಮಭೂತ್ ಕಿಲ ಯಃ
ಪ್ರಥಿತಯಶಃಪ್ರಭಾವವಿದಿತಾತಿಶಯಃ ಪರಿತಃ ।
ಯವನಚಮೂಭಯೇನ ಪುರತಶ್ಚಲತೋऽಸ್ಯ ಸರಿತ್
ವ್ಯದಿಶತ ವರ್ತನೀಮನು ನಿರುದ್ಧಚಮೂನಿಚಯಾ ॥ – ಶ್ರೀಸತ್ಯನಿಧಿವಿಲಾಸಃ (೩/೨೬)

ಯವನಾನಾಂ ಮ್ಲೇಂಛಾನಾಂ ಚಮೂಭ್ಯಃ, ಸೇನಾಭ್ಯೋ ಭಯೇನ ಪುರತಃ ಚಲತಃ ಅಸ್ಯ ರಘುವರ್ಯತೀರ್ಥಸ್ಯ ಸರಿತ್ ಭೀಮರಥೀ ಅನು ಪಶ್ಚಾತ್, ನಿರುದ್ಧಃ ಚಮೂನಾಂ ನಿಚಯೋ ಯಸ್ಯಾಃ ಸಾ ತಥೋಕ್ತಾ ಸತೀ ವರ್ತನೀಂ ಏಕಪದೀಂ ಏಕಪದಸಂಚಾರಯೋಗ್ಯಮಾರ್ಗಮಿತ್ಯರ್ಥಃ।
– ಲಕ್ಷ್ಮೀಶ್ವರನರಸಿಂಹಕೃತಶ್ರೀಸತ್ಯನಿಧಿವಿಲಾಸವ್ಯಾಖ್ಯಾನ(ಸರ್ವತೋವಿಲಾಸ)

ಭಯೇನ ಚಮ್ವಾ ಯವನಸ್ಯ ಗಚ್ಛತಃ ಪುರಃಸೃತಿಂ ಯಸ್ಯ ಹಿ ಭೀಮರಥ್ಯದಾತ್ ।
ತತೋऽಭವದ್ರುದ್ಧಸಮಸ್ತಸೈನಿಕಾ ಸ ರಾಘವಾರ್ಚೀ ರಘುವರ್ಯಸಂಜ್ಞಕಃ ॥
– ಸತ್ಯಬೋಧವಿಜಯ (೧/೩೨)

ಸೇನಯಾ ಸಹ ಕಸ್ಮಿಂಶ್ಚಿತ್ ಮ್ಲೇಂಛನಾಥೇ ದೇವತಾರ್ಚಾಪಹಾರಾರ್ಥಮಾಗತೇ ಸತಿ ರಘುವರ್ಯ-ಸ್ವಾಮಿಭಿಃ ದೇವತಾರ್ಚಾಂ ಗೃಹೀತ್ವಾ ಶೀಘ್ರಂ ಮಹಾಪೂರವಿಶಿಷ್ಟಭೀಮರಥೀಸಮೀಪಂ ಪ್ರತ್ಯಾಗತಮ್ । ತದಾ ರಾಮಚಂದ್ರಪ್ರಸಾದೇನ ಭೀಮರಥ್ಯಾ ಏಕಪುರುಷಗಮನಾನುಕೂಲ-ಮಾರ್ಗೋ ದತ್ತಃ। ತೇನ ಮಾರ್ಗೇಣ ಯದಾ ರಘುವರ್ಯಸ್ವಾಮಿಭಿಃ ಪರತೀರಂ ಪ್ರತಿಗತಂ ತದೈವ ಸೇನಾಸಹಿತಮ್ಲೇಂಛನಾಥಸ್ಯ ಭೀಮರಥ್ಯುದಕೇನ ಮಾರ್ಗನಿರೋಧೋ ಜಾತಃ । ಅನಂತರಂ ರಾಮಚಂದ್ರಪ್ರಸಾದೇನ ಶ್ರೀರಾಮಚಂದ್ರಪೂಜಾ ಪರಮಸೌಖ್ಯೇನ ಕೃತಾ।
– ಶ್ರೀಸತ್ಯಾಭಿನವತೀರ್ಥಕೃತಗುರುಪರಂಪರಾಸ್ತೋತ್ರವ್ಯಾಖ್ಯಾನ

ರೂಪದ ದಾಂಪತ್ಯ. ಧರ್ಮನಿಷ್ಠೆ ಅವರ ಸ್ವಭಾವವಾಗಿತ್ತು. ಬೇರೆಲ್ಲ ಭಾಗ್ಯ ಅವರಿಗಿ-ದ್ದರೂ, ಸಂತತಿಯಿಲ್ಲದ ಕೊರಗು ಮಾತ್ರ ಕಾಡುತ್ತಲೇ ಇತ್ತು. ಅದಕ್ಕಾಗಿ ಅವರು ಬಗೆಬಗೆಯ ವ್ರತ ಉಪವಾಸಗಳ ಕಠೋರತಪಸ್ಸನ್ನು ಕೈಗೊಂಡಿದ್ದರು. ಶ್ರೀರಘುವರ್ಯತೀರ್ಥರ ಆಗಮನದಲ್ಲಿ ತಮ್ಮ ಸಮಸ್ಯೆಯ ಪರಿಹಾರದ ಸೂಚನೆಯನ್ನು ಅವರು ಕಂಡರು. ಅವರ ಪ್ರಾರ್ಥನೆಯನ್ನು ಮನ್ನಿಸಿ, ಅನುಗ್ರಹಿಸಿದ ಶ್ರೀರಘುವರ್ಯರು ನುಡಿದರು – ''ನಿಮ್ಮ ತಪಸ್ಸು ಫಲಿಸಿದೆ. ನಿಮಗೊಬ್ಬ ವಂಶೋದ್ಧಾರಕನಾದ ಪುತ್ರ ಜನಿಸುವನು. ಆದರೆ ಅವನನ್ನು ನೀವು ನಮಗೆ, ಎಂದರೆ ಶ್ರೀಮಠಕ್ಕೆ , ಒಪ್ಪಿಸಬೇಕು''. ದಂಪತಿಗಳಿಗೆ ಆನಂದ, ದುಃಖಗಳೆರಡೂ ಒಟ್ಟಿಗೇ ಉದ್ಭವಿಸಿದವು. ಅಪೂರ್ವಪುತ್ರನನ್ನು ಪಡೆಯುವ ಆನಂದ ; ಅವನನ್ನು ಅಗಲಿರಬೇಕಾದ ವ್ಯಥೆ. ಆದರೆ ಗುರುವಾಣಿ ಅವರಿಗೆ ದೈವಸಂದೇಶವಾಯಿತು. ತಮ್ಮ ಸಮ್ಮತಿಯನ್ನು ಅವರು ಕೂಡಲೆ ತಿಳಿಸಿಯೂ ಬಿಟ್ಟರು.

ಅನಂತರ ಕೆಲವೇ ಸಮಯದಲ್ಲಿ ಅವರಿಗೆ ಲಕ್ಷಣಭರಿತವಾದ ಶಿಶು ಜನಿಸಿತು. ಭೂಸ್ಪರ್ಶ-ವಿಲ್ಲದೆ ಜನನವಾಗಬೇಕೆಂಬ ಯೋಚನೆಯಿಂದ ಶ್ರೀರಘುವರ್ಯರು ಪ್ರಸವಕಾಲಕ್ಕೆ ಒದಗುವಂತೆ ಒಂದು ಚಿನ್ನದ ಹರಿವಾಣವನ್ನೇ ಕಳುಹಿಸಿದ್ದರಂತೆ. ಶ್ರೀವ್ಯಾಸರಾಜರ ಹಾಗೂ ಶ್ರೀವಾದಿರಾಜರ ಜನನವೂ ಹಾಗೆ ಭೂಸ್ಪರ್ಶವಿಲ್ಲದೆ ಆದ ಉಲ್ಲೇಖ ಉಂಟು. ಮನುಷ್ಯಾನ್ನದಂತೆ ಭೂಸ್ಪರ್ಶವೂ ಅಂತಃಸತ್ತ್ವವನ್ನು ಕುಂದಿಸುವ ಸಾಧನ. ಭೂಸ್ಪರ್ಶವಿಲ್ಲದ ಜನನ ಮಮಕಾರವಿಲ್ಲದ ವಿರಕ್ತಜೀವನಕ್ಕೆ ಸಂಕೇತ. ಅಂತಹ ಜ್ಞಾನಿಗಳ ಬದುಕು ಧನಕನಕಗಳನ್ನು ಮೆಟ್ಟಿ ಬದುಕುವ ಹಿರಿಮೆಯಿಂದ ಕೂಡಿದಂತಹುದು. ಮಗುವಿನ ಪೋಷಣೆಗೆಂದು ಅವರು ಪ್ರತಿನಿತ್ಯ ಭಗವಂತನಿಗೆ ಅಭಿಷೇಕಿಸಿದ ಗೋಕ್ಷೀರದ ವ್ಯವಸ್ಥೆ ಕಲ್ಪಿಸಿದರು. ಅವರು ಸುವರ್ಣದ ಹರಿವಾಣದ ಮೇಲೆ ಜನಿಸಿದ್ದು ಶಾಸ್ತ್ರಸುವರ್ಣವನ್ನು ಮಸ್ತಕದಲ್ಲಿ ಧರಿಸುವುದಕ್ಕೆ ಸೂಚನೆಯಾಯಿತು. ಅವರು ಕುಡಿದ ಅಭಿಷೇಕದ ಹಾಲು ಭಗವದ್ಗೀತಾದಿಶಾಸ್ತ್ರಗಳನ್ನು ಉಪದೇಶಿಸುವ ಗುರುತ್ವಕ್ಕೆ ಸಾಧನೆಯಾಯಿತು. ಹುಟ್ಟುವ ಸ್ಥಳ, ರೀತಿ, ತಿನ್ನುವ ಆಹಾರ ಬದುಕನ್ನು ರೂಪಿಸುವ ವಿವರ ಭಗವದ್ಗೀತೆಯಲ್ಲಿ ಬಂದಿದೆ. ಇಂತಹ ಅಪೂರ್ವಪರಿಕರಗಳಿಂದಾಗಿ ಮಗುವಿನ ವರ್ಚಸ್ಸು ವಿಶೇಷವಾಗಿ ವರ್ಧಿಸತೊಡಗಿತು. ಅದಕ್ಕೆ ರಾಮಚಂದ್ರ ಎಂದು ನಾಮಕರಣ ಮಾಡಿದ್ದು ಸಹ ಅದು ಮುಂದೆ ರಾಮಚಂದ್ರದೇವರ ಪೂಜೆ ಮಾಡುವುದಕ್ಕೆ ಸೂಚನೆ ಎನ್ನಿಸಿತು. ಉಪನಯನದವರೆಗೂ ತಮ್ಮ ಬಳಿಯೇ ಇರಿಸಿಕೊಳ್ಳುವ ಅವಕಾಶವನ್ನು ಅದರ ತಂದೆತಾಯಿಗಳಿಗೆ ನೀಡಿದರು. ಅವರಿನ್ನೂ ಮೂರು ವರ್ಷದ ಮಗುವಾಗಿದ್ದಾಗಲೇ ಒಮ್ಮೆ ಆಸುರೀಶಕ್ತಿಯೊಂದು ಗಾಡಿಯೊಳಗೆ ಹೊಕ್ಕು ಇವರ ಮೇಲೆ ಹರಿಯುವ ಮೂಲಕ ಕೊಲ್ಲಲೆಂದು ಪ್ರಯತ್ನಿಸಿದ್ದಿತಂತೆ. ಆ ಶಕಟಾಸುರಭಂಜನನಾದ ಶ್ರೀಕೃಷ್ಣನ ರಕ್ಷಣೆ ಪಡೆದಿದ್ದ ಅವರು ಆ ಆಪತ್ತಿನಿಂದ ಸುರಕ್ಷಿತವಾಗಿ ಪಾರಾದರು. ಇವರ ಮೇಲೆ ನುಗ್ಗಲಿದ್ದ ಗಾಡಿ ಪಕ್ಕಕ್ಕೆ ಉರುಳಿ, ಇವರು ಸುರಕ್ಷಿತರಾದರು. ಗಾಡಿಯಲ್ಲಿ ಕುಳಿತವರೂ ಅಪಾಯದಿಂದ ಪಾರಾಗಿದ್ದರು. ಗಾಡಿಯೊಂದಿಗೆ ಅಸುರ ನಾಶವಾದ.

ಉಪನಯನವನ್ನು ಜನ್ಮಾಷ್ಟಮದಲ್ಲಿ ಮಾಡುವುದು ವಿಹಿತ. ಗರ್ಭಾಷ್ಟಮವಾದಲ್ಲಿ ಇನ್ನೂ ಒಳಿತು. ವಿಶೇಷವಾದ ಸಿದ್ಧಿಯನ್ನು ಪಡೆಯುವ ಹಿನ್ನೆಲೆಯಲ್ಲಿ ಅದಕ್ಕಿಂತ ಮುಂಚಿತವಾಗಿಯೂ ಉಪನಯನ ಮಾಡುವ ಅವಕಾಶವನ್ನು ಶಾಸ್ತ್ರಗಳು ನೀಡಿವೆ. ಇಲ್ಲಿ ನಡೆದದ್ದೂ ಹಾಗೆಯೇ. ಶ್ರೀವ್ಯಾಸರಾಜ, ಶ್ರೀವಾದಿರಾಜರಿಗಾದಂತೆ ಇವರಿಗೂ ಐದನೆಯ ವರ್ಷದಲ್ಲೇ ಉಪನಯನ ನಡೆಯಿತು. ಅದರೊಂದಿಗೆ ಆ ಮಗುವನ್ನೂ ತಮ್ಮ ಸಂಸ್ಥಾನಕ್ಕೆ ಒಪ್ಪಿಸಬೇಕೆಂಬ ಗುರುಗಳ ಸಂದೇಶವೂ ಆ ದಂಪತಿಗಳಿಗೆ ತಲುಪಿತ್ತು. ಮಾನಸಿಕವಾಗಿ ಅವರು ಅದಕ್ಕೆ ಸಿದ್ಧರಾಗಿದ್ದರು ಸಹ. ಅದರಂತೆ ಸ್ವತಃ ಮಗುವಿನೊಂದಿಗೆ ಗುರುಗಳ ಬಳಿ ತೆರಳಿ, ಅವರ ಪದತಲಕ್ಕೆ ಸಮರ್ಪಿಸಿ, ತಮ್ಮ ಮಾತನ್ನು ಉಳಿಸಿಕೊಂಡರು. ಅವರ ಪ್ರಾಮಾಣಿಕತೆಗೆ ಭಗವಂತ ಮೆಚ್ಚಿದ. ಕೆಲವೇ ದಿನಗಳಲ್ಲಿ ಅವರಿಗೆ ಹೆಣ್ಣುಮಗುವೊಂದು ಜನಿಸಿತು.

ವಟುವಿನ ಸದಾಚಾರ, ಜ್ಞಾನಲಾಲಸೆಗಳು ಗುರುಗಳಿಗೆ ತುಂಬಾ ಪ್ರಿಯವಾದವು. ತಮಗೆ ಆ ಮುಂಚೆಯೇ ದೊರೆತಿದ್ದ ದೈವಸೂಚನೆ ಅವರಿಗೆ ಮತ್ತೆ ಮತ್ತೆ ಸ್ಮರಣೆಗೆ ಬರುತ್ತಿತ್ತು. ಮಠಮಾನ್ಯಗಳು ಮೂಲತಃ ತತ್ತ್ವಪ್ರಸಾರ ಹಾಗೂ ಧರ್ಮಶಿಕ್ಷಣಗಳಿಗಾಗಿ ರೂಪುಗೊಂಡ ಆಧ್ಯಾತ್ಮಿಕಸಂಸ್ಥೆಗಳು. ಅವುಗಳ ಯಶಸ್ಸು ಅವನ್ನಾಳುವ ಪೀಠಾಧೀಶರ ಯೋಗ್ಯತೆಯನ್ನು ಅವಲಂಬಿಸಿರುತ್ತದೆ. ಅರ್ಹಮಠಾಧಿಪತಿಯಿಂದ ಇಡೀ ಸಮಾಜದ ಸ್ಥಿತಿ ಪ್ರಗತಿಯತ್ತ ಸಾಗುತ್ತದೆ. ಇಲ್ಲವಾದಲ್ಲಿ ಸಂಸ್ಥೆಯೊಂದಿಗೆ ಸಮಾಜವೂ ಬಡವಾಗುತ್ತದೆ. ಅದಕ್ಕಾಗಿಯೇ ಪ್ರತಿಯೊಬ್ಬ ಯೋಗ್ಯಮಠಾಧೀಶನೂ ಯೋಗ್ಯ ಉತ್ತರಾಧಿಕಾರಿಗಾಗಿ ತಾನು ಪೀಠಕ್ಕೆ ಬಂದ ದಿನದಿಂದಲೇ ಅನ್ವೇಷಣೆ ನಡೆಸಿರುತ್ತಾನೆ. ಅದರಲ್ಲೂ ಯಶಸ್ಸು ಕಾಣಲು ಸಾಧ್ಯ-ವಾಗುವುದು ಶ್ರೀರಘುವರ್ಯತೀರ್ಥರಂತಹ ಕೆಲವರಿಗೆ ಮಾತ್ರ. ಆ ಚಿಂತೆಯಲ್ಲಿದ್ದಾಗಲೇ ಅವರಿಗೆ ಸೂಚನೆ ಲಭಿಸಿತ್ತು. ''ಲೋಕಖ್ಯಾತಿಯ ಯೋಗ್ಯಶಿಷ್ಯ ನಿಮಗೆ ಲಭಿಸುವನು''.

ಶ್ರೀರಘುವರ್ಯರು ತಡ ಮಾಡಲಿಲ್ಲ. ಆನಂದಸಂವತ್ಸರದ ಚೈತ್ರಮಾಸದ ಶುಕ್ಲದ್ವಿತೀಯಾ (ಕ್ರಿ.ಶ. ೧೫೫೪, ಮಾರ್ಚ್ ೫, ಶುಕ್ರವಾರ, ರೇವತೀನಕ್ಷತ್ರ)ದ ಶುಭಮುಹೂರ್ತವೊಂದರಲ್ಲಿ ವಟುವಿಗೆ ಸನ್ನ್ಯಾಸವನ್ನು ನೀಡಿ[೧], **'ಶ್ರೀರಘೂತ್ತಮತೀರ್ಥ'** ಎಂದು ನಾಮಕರಣ ಮಾಡಿ,

---

೧. ಸ್ವಪೂರ್ವಾಶ್ರಮಸಂಬಂಧಿಭಾಗಿನೇಯಂ ವಿದಾಂವರಮ್ ।
ಬ್ರಹ್ಮಚರ್ಯಾಶ್ರಮೋಪೇತಂ ಪದವಾಕ್ಯವಿಶಾರದಮ್ ॥
ಆಹೂಯ ದತ್ವಾ ಸನ್ನ್ಯಾಸಂ ಉಪದಿಶ್ಯಾಮಲಂ ಮನುಮ್ ।
ಆನಂದವತ್ಸರೇ ಚೈತ್ರೇ ಮಾಸಿ ಶುಕ್ಲದ್ವಿತೀಯಕೇ ।
ಪಟ್ಟಾಭಿಷೇಕಂ ಕೃತ್ವೈನಂ ನಾಮ್ನಾ ಚಕ್ರೇ ರಘೂತ್ತಮಮ್ ॥ — ಗುರುಚರ್ಯಾ

ರಘುವರ್ಯಸುತೀರ್ಥೋಽಪಿ ಸ್ವಪೂರ್ವಾಶ್ರಮಗಸ್ವಸುಃ ।
ಪುತ್ರಂ ಕರ್ನಾಟೋತ್ತರಾದಿಂ ಆತ್ಮಾಧೀತಾನ್ಯಶಾಸ್ತ್ರಕಮ್ ॥
ಸನ್ನ್ಯಸ್ಯ ಬ್ರಹ್ಮಚರ್ಯೇಣ ಸುಖಸಂವತ್ಸರೇ ಗುರುಃ ।
ಪಟ್ಟಾಭಿಷಿಚ್ಯ ಸಂಸ್ಥಾಪ್ಯ ರಘೂತ್ತಮಸಮಾಹ್ವಯಮ್ ॥ — ಗುರುಚರ್ಯಾ (೪/೩೫,೩೬)

ತತಸ್ತು ರಘುವರ್ಯಾಶ್ಚಾನಂದಸಂವತ್ಸರೇ ಮುದಾ ।
ಸ್ವಪೂರ್ವಾಶ್ರಮಸಂಬಂಧಿಭಾಗಿನೇಯಾಯ ಸಾಧವೇ ॥

ವೇದಾಂತಪೀಠದಲ್ಲಿ ಪಟ್ಟಾಭಿಷೇಕ ಮಾಡಿದರು. ಉತ್ತರಾದಿಮಠದ ಇತಿಹಾಸದಲ್ಲಿ ಮೊದಲ ಬಾರಿಗೆ ತುಂಬಾ ಕಿರಿಯ ವಯಸ್ಸಿನಲ್ಲಿ ಅದರಲ್ಲೂ ಬ್ರಹ್ಮಚರ್ಯಾಶ್ರಮದಿಂದಲೇ ಸನ್ಯಾಸಸ್ವೀಕರಿಸಿದ ಅಪೂರ್ವ ದಾಖಲೆ ಇವರದಾಯಿತು. ಗುರುಗಳು ಸನ್ಯಾಸದೀಕ್ಷೆ ನೀಡಿದ ಅನಂತರ ಇನ್ನೂ ಹೆಚ್ಚಿನ ರೀತಿಯಲ್ಲಿ ಪಾಠ ಹೇಳತೊಡಗಿದರು. ಸ್ವತಃ ಸಕಲಶಾಸ್ತ್ರ-ಪಾರಂಗತರಾಗಿದ್ದ ಅವರಿಗೆ ಶಿಷ್ಯನನ್ನೂ ಹಾಗೆ ತಯಾರು ಮಾಡುವ ಕಾತರ ತುಂಬಿತ್ತು. ಶಸ್ತ್ರಾಭ್ಯಾಸ ಮಾಡಿಸದೆ ಸಮರಕ್ಕೆ ದೂಡುವಷ್ಟೇ ಅಪಾಯಕರ ಶಾಸ್ತ್ರಾಭ್ಯಾಸ ಮಾಡಿಸದೆ ಶಿಷ್ಯರನ್ನು ಜೀವನಕುರುಕ್ಷೇತ್ರಕ್ಕೆ ಇಳಿಸುವುದು. ತಮ್ಮ ಜನರ ಒಳಿತನ್ನು ಬಯಸುವ ಹೆಚ್ಚು ಜನ ಅಂತಹ ಒಳಿತಿಗೆ ಸಾಧನವಾದ ಶಾಸ್ತ್ರಜ್ಞಾನವನ್ನು ತಮ್ಮ ಮಕ್ಕಳಿಗೆ ನೀಡುವ ಕರ್ತವ್ಯವನ್ನು ಮರೆಯುವರು. ಅದರಿಂದಾಗಿ ಅವರ ಆಸೆ ಬರಿ ಆಸೆಯಾಗಿಯೇ ಉಳಿದು, ಸಿದ್ಧಿಯ ಹಂತವನ್ನು ತಲುಪದೇ ಹೋಗುವರು. ಶ್ರೀರಘುವರ್ಯರು ಶಿಷ್ಯನ ಹಾಗೂ ಆ ಮೂಲಕ ಸಮಾಜದ ಉಳಿವಿನ ಬಗ್ಗೆ ವಹಿಸಿದ ಎಚ್ಚರ ಅತ್ಯಂತ ಆದರ್ಶಪ್ರಾಯವಾದುದು.

ಶಾಸ್ತ್ರಪಾಠದೊಂದಿಗೆ ಸಂಸ್ಥಾನವನ್ನು ನಿರ್ವಹಿಸುವ ಆಡಳಿತಕೌಶಲವನ್ನೂ ಗುರುಗಳು ತಿಳಿಸತೊಡಗಿದರು.

"ರಘೂತ್ತಮರೇ ! ಗಮನಿಸಿರಿ. ಈಗ ನಡೆಯುತ್ತಿರುವುದು [೧]ಕಲಿಕಾಲ. ಈಗಿನ ಜನಕ್ಕೆ ಪುಣ್ಯಕಾರ್ಯಕ್ಕಿಂತ ಪಾಪಕಾರ್ಯದಲ್ಲೇ ಹೆಚ್ಚು ಆಸಕ್ತಿ. ಧನವೇ ಇವರ ಸರ್ವಸ್ವ. ಧನಾರ್ಜನೆಗಾಗಿ ಇವರು ಹಿಡಿಯದ ಹಾದಿಯೇ ಇಲ್ಲ. ಗುರುಹಿರಿಯರನ್ನು ಕಂಡರಂತೂ ಇವರಿಗೆ ಗೌರವದ ಬದಲು ಅವಜ್ಞೆಯೇ. ಅದರಲ್ಲೂ ಸದಾಚಾರಿಗಳನ್ನು, ವ್ರತಶೀಲರನ್ನು

---

ಬ್ರಹ್ಮಚರ್ಯವ್ರತಸ್ಥಾಯ ದತ್ವಾ ಸನ್ಯಾಸಮಾದರಾತ್ ।
ಕೃತ್ವಾಽಭಿಷೇಕಂ ಸದಸಿ ದದುರ್ನಾಮ ಮನೋಹರಮ್ ॥
ರಘೂತ್ತಮಯತೀಂದ್ರೋಽಯಮಿತಿ ಸರ್ವಜಗದ್ಗುರೋಃ ।
ದತ್ವಾ ತಸ್ಯಾಣುಸಂಸ್ಥಾನಂ ಬೋಧಯಾಮಾಸುರನ್ವಹಮ್ ॥

– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೧೧/೨೩-೨೫)

೧. ಅಹೋ ಬಲೀಯಾನ್ ಪಾಪೀಯಾನ್ ಕಲಿಕಾಲಃ ಸಮಾಗತಃ ।
ಪ್ರಾಯಃ ಸಂಸ್ಥಾನಯುಕ್ತಾನಾಂ ಮಾನಹಾನಿಃ ಪದೇ ಪದೇ ॥
ದುರಾಚಾರರತಾಃ ಸರ್ವೇ ಮದಾಂಧಾ ಧನಗರ್ವಿತಾಃ ।
ಭಾಗ್ಯಹೀನಾನ್ ಯತೀನಸ್ಮಾನ್ ಪೂಜಯಂತಿ ಕಥಂ ಖಲಾಃ ॥
ತಸ್ಮಾದಾಂದೋಲಿಕಾಛತ್ರಚಾಮರಧ್ವಜಸಂಯುತಾಃ ।
ಗಜವಾಜಿಮಹಾವಾದ್ಯಯುಕ್ತಾ ಬಂದಿಮುಖ್ಯೈಃ ಸ್ತುತಾಃ ॥
ಗ್ರಾಮೇ ಗ್ರಾಮೇ ಮಠಂ ಕೃತ್ವಾ ಸ್ಥಾಪಯಿತ್ವಾಽಧಿಕಾರಿಣಃ ।
ಯೂಯಂ ಭೂಮೌ ಸಂಚರಧ್ವಂ ಪೂಜಯಂತೋ ರಘೂತ್ತಮಮ್ ॥
ಏವಂ ಸರ್ವಂ ಬೋಧಯಿತ್ವಾ ರಘುವರ್ಯಾ ರಘೂತ್ತಮಾನ್ ।
ತತ್ತ್ವಪ್ರಕಾಶಿಕಾಂ ತೇಭ್ಯೋ ವಕ್ತುಮಾರೇಭಿರೇ ತತಃ ॥

– ಪೂರ್ಣಬೋಧಗುರುವಂಶಕಥಾಕಲ್ಪತರು(೧೧/೨೬-೩೦)

ಭಗವನ್ನಿಷ್ಠರನ್ನು ಕಂಡರೆ ಇವರಿಗೆಲ್ಲ ಅವಮಾನಿಸುವ ಕಾತರರ ಪೀಠಾಧೀಶರ ಬಗ್ಗೆಯೂ ಇವರದು ದುರಹಂಕಾರದ ನಡೆಯೇ. ದುರಾಚಾರವನ್ನೇ ನೆಚ್ಚುವ ಈ ಕೊಬ್ಬಿದ ಜನ ಸಂಪತ್ತಿನಿಂದ ಮೈಮರೆಯುವವರು. ನಿಷ್ಕಿಂಚನರಾದ ಯತಿಗಳನ್ನು ಸಹ ಈ ಧೂರ್ತರು ಎಂದೂ ಗೌರವಿಸರು. ಸಿರಿಯ ಮದ ಇವರಿಂದ ಮಾಡಿಸದ ಅಕಾರ್ಯವೇ ಇರದು. ಇಂತಹವರ ಮಧ್ಯೆಯೇ ನಾವು ಧರ್ಮಸ್ಥಾಪನೆ ಮಾಡಬೇಕಿದೆ. ಜಿಜ್ಞಾಸುಜನಗಳ ಶ್ರೇಯಸ್ಸಿಗಾಗಿ ಇಂತಹವರ ಅವಜ್ಞೆಯ ಮಧ್ಯೆಯೂ ನಾವು ತತ್ತ್ವಪ್ರಸಾರವನ್ನು ಮಾಡಲೇಬೇಕಾಗಿದೆ. ಆದರೆ ನಾವು ಇಂತಹವರಿಗೆ ಸೊಪ್ಪು ಹಾಕುವವರಲ್ಲ ಎಂದೂ ತೋರಿಸಬೇಕು. ಈ ದುರಹಂಕಾರಿಗಳ ದಮನಕ್ಕಾಗಿ ನಮ್ಮ ಸಂಸ್ಥಾನಗಳಲ್ಲಿ ಆನೆ, ಕುದುರೆ, ಛತ್ರ, ಚಾಮರ, ಧ್ವಜ ಮೊದಲಾದ ವೈಭವ ಇನ್ನು ಮುಂದೆ ಅನಿವಾರ್ಯ. ನಗಾರಿ ಮೊದಲಾದ ಮಹಾವಾದ್ಯಗಳೂ ಸಹ ಅತ್ಯಗತ್ಯ. ಜ್ಞಾನಪ್ರಪಂಚದ ಹಾಗೂ ಸನಾತನ ಧರ್ಮಸಂಸ್ಥೆಗಳ ಹಿರಿಮೆಯನ್ನು ಸಾರಲೆಂದು ವಂದಿಮಾಗಧರೂ ಬೇಕಾಗುವರು. ಊರೂರಿನಲ್ಲಿ ಮಠಗಳನ್ನು ಸ್ಥಾಪಿಸಬೇಕು. ಅಲ್ಲಿ ಧರ್ಮಾಧಿಕಾರಿಗಳನ್ನು ನೇಮಿಸಿ, ಜನತೆಗೆ ಸೂಕ್ತಮಾರ್ಗದರ್ಶನ ನೀಡುವ ವ್ಯವಸ್ಥೆಯಾಗಬೇಕು. ಅಂತೂ ಮಠಗಳಿಗೆ ರಾಜವೈಭವ ಇಂದಿನ ದಿನಗಳಲ್ಲಿ ಅನಿವಾರ್ಯ. ಅದನ್ನು ಸಂಪಾದಿಸಿ, ತತ್ತ್ವಪ್ರಸಾರದಲ್ಲಿ ತೊಡಗುವುದು ನಿಮ್ಮ ಗುರಿಯಾಗಲಿ''.

ಶ್ರೀರಘೂತ್ತಮರಿಗೆ ಗುರುಗಳ ಆದೇಶ ಹೊಸಪರಿಯದೆನ್ನಿಸಿತು. ಆ ಮಾತನ್ನು ಅವರು ಯಾವ ಹಿನ್ನೆಲೆಯಲ್ಲಿ ನುಡಿಯುತ್ತಿರುವರು ಎಂಬುದನ್ನು ಅರಿಯಲು ಯತ್ನಿಸತೊಡಗಿದರು. ಹೀಗೆ ಸಂದೇಶ ನೀಡಿದ ಶ್ರೀರಘುವರ್ಯರು ಶ್ರೀರಘೂತ್ತಮರಿಗೆ ಪ್ರಕರಣಗ್ರಂಥಗಳ ಪಾಠವನ್ನು ಪೂರೈಸಿ, ತತ್ತ್ವಪ್ರಕಾಶಿಕಾಗ್ರಂಥದ [೧]ಪಾಠವನ್ನು ಪ್ರಾರಂಭಿಸಿದರು. ತತ್ತ್ವಪ್ರಕಾಶಿಕೆ ಆಚಾರ್ಯ ಶ್ರೀಮಧ್ವರ ಬ್ರಹ್ಮಸೂತ್ರಭಾಷ್ಯದ ಮೇಲಿನ ಶ್ರೀಜಯತೀರ್ಥರ ಟೀಕಾಗ್ರಂಥ. ಅದರ ಅಧ್ಯಯನ ಬ್ರಹ್ಮಸೂತ್ರಗಳ ಹೃದಯವನ್ನೇ ತೆರೆದಿಡುವ ಅಪೂರ್ವಸಾಧನ. ಅದನ್ನು ಸರಿಯಾಗಿ ತಿಳಿದವರಿಗೆ ಶಾಸ್ತ್ರಪ್ರಪಂಚವೇ ಕರತಲಾಮಲಕ. ಶ್ರೀರಘೂತ್ತಮರ ಜೀವನದಲ್ಲಿ ಅದೊಂದು ಅತ್ಯಂತ ಅಪೂರ್ವಘಟ್ಟ. ಅವರ ವಯಸ್ಸು ಚಿಕ್ಕದಾದರೂ, ಪ್ರತಿಭೆ ಅಪಾರವಾಗಿದ್ದರಿಂದಾಗಿ ಅಂತಹ ಕೃತಿಯ ಗ್ರಹಣ ಅವರಿಗೆ ಶ್ರಮದಾಯಕವೆನ್ನಿಸದಾಯಿತು.

ಆ ವೇಳೆಗೆ ಶ್ರೀರಘುವರ್ಯರು ನೆಲೆಸಿದ್ದ ಸ್ಥಳ ವಿಜಯನಗರವಾಗಿತ್ತು. ಶ್ರೀವ್ಯಾಸರಾಜರಿಂದ ಅಲ್ಲಿ ಬೀಸಿದ್ದ ತತ್ತ್ವಜ್ಞಾನದ ಗಾಳಿ ಅವರ ಪಾಠಪ್ರವಚನಗಳಿಗೆ ಉತ್ತಮವೇದಿಕೆಯನ್ನು ನಿರ್ಮಿಸಿತ್ತು. ಆ ವೇಳೆಗೆ ಶ್ರೀರಘುವರ್ಯರಿಗೆ ಅಂತ್ಯಕಾಲ ಸಮೀಪಿಸತೊಡಗಿತ್ತು. ಅದನ್ನು ಗ್ರಹಿಸಿದ ಅವರು ಶ್ರೀರಘೂತ್ತಮರಿಗೆ ಸಂಸ್ಥಾನವನ್ನು ಒಪ್ಪಿಸಿದರು. ಮಣೂರಿನಲ್ಲಿ ನೆಲೆಸಿದ್ದ

---

೧. ವ್ಯಾಖ್ಯಾಯಾಸ್ಮೈ ಪ್ರಕರಣಾನಿ ಸೂತ್ರಭಾಷ್ಯಮಥಾರಭತ್ ।
ಏತಸ್ಮಿನ್ನಂತರೇ ತಸ್ಯ ಪ್ರಾಪ್ತಕಾಲಂ ನಿರೀಕ್ಷ್ಯ ಸಃ ॥
ಸ ಶ್ರೀಮದ್ರಘುನಾಥತೀರ್ಥಮುಖತೋ ಬ್ರಹ್ಮಾಪರೋಕ್ಷಜ್ಞತಃ ।
ಶ್ರೀಮನ್ಮಧ್ವನಯಂ ಮಹಾಸುಖಕರಂ ಶುಶ್ರಾವ ಭಕ್ತ್ಯಾನ್ವಿತಃ ॥ – ಆದ್ಯವಂಶಪ್ರದೀಪ

ತಮ್ಮ ಶಿಷ್ಯರಾದ ಆದ್ಯವರದರಾಜಾಚಾರ್ಯರೆಂಬ ಪಂಡಿತವರೇಣ್ಯರನ್ನು ತಮ್ಮಲ್ಲಿಗೆ ಕರೆಸಿಕೊಂಡರು. ಅವರು ಇವರ ಗುರುಗಳಾದ ಶ್ರೀರಘುನಾಥತೀರ್ಥರಲ್ಲಿ ಅಧ್ಯಯನ ಮಾಡಿ ಅಪಾರವೈದುಷ್ಯವನ್ನು ಸಂಪಾದಿಸಿದ್ದ ವಿದ್ವನ್ಮಣಿಗಳು. ವರದರಾಜಾಚಾರ್ಯರದು ಆದರ್ಶಗುರುಭಕ್ತಿ. ಗುರ್ವಾಜ್ಞೆಯಂತೆ ಅವರು ಹಂಪೆಗೆ ಧಾವಿಸಿದರು. ಅವರಿಗೆ ತಮಗೆ ಅಂತ್ಯಕಾಲ ಒದಗಿರುವುದನ್ನು ತಿಳಿಸಿ, ಆದೇಶ ನೀಡಿದರು – ''ಇನ್ನು ಮೇಲೆ ಶ್ರೀರಘೂತ್ತಮ-ಮುನಿಗಳ ಅಧ್ಯಯನ ನಿಮ್ಮಲ್ಲಿ ಮುಂದುವರೆಯುವುದು[೧].''

ಶ್ರೀವರದರಾಜಾಚಾರ್ಯರು ಅವರ ಅಭಿಲಾಷೆಯನ್ನು ಪೂರೈಸುವುದಾಗಿ ವಚನ ನೀಡಿದರು[೨]. ಪಿಂಗಳ ಸಂವತ್ಸರ (ಕ್ರಿ.ಶ. ೧೫೫೭, ಜೂನ್ ೧೫)ದ ಜ್ಯೇಷ್ಠಮಾಸದ ಕೃಷ್ಣಪಕ್ಷದ ತೃತೀಯಾದಿನದಂದು ಶ್ರೀರಘುವರ್ಯತೀರ್ಥರು[೩] ಆನೆಗೊಂದಿಯಲ್ಲಿ ವೈಕುಂಠಯಾತ್ರೆ ಮಾಡಿದರು.

## ಶ್ರೀರಘೂತ್ತಮರ ಅಧ್ಯಯನ

ಶ್ರೀರಘೂತ್ತಮರು ಆನೆಗೊಂದಿಯಲ್ಲಿ ಗುರುಗಳ ವೃಂದಾವನಸ್ಥಾಪನೆಯ ಕಾರ್ಯ-ವನ್ನು ಪೂರೈಸಿದರು. ಆ ಸ್ಥಳದಲ್ಲಿ ಆ ಮೊದಲೇ ಶ್ರೀಮದಾಚಾರ್ಯರ ಶಿಷ್ಯಶ್ರೇಷ್ಠರೆನ್ನಿಸಿದ್ದ

---

೧. ಅಸ್ಮದ್ಗುರುಮುಖಾಂಭೋಜಾದಾಪ್ತಶಾಸ್ತ್ರಾನ್ಮಹಾಮತೇ ।
ಶ್ರೀಮದ್ವರದರಾಜಾರ್ಯಾದ್ಗ್ರಂಥಪಾರಮವಾಪ್ನುಹಿ ।
ತೇಷಾಮಾಜ್ಞಾ ಕೃತಾಽಸ್ಮಾಭಿರೇವಮೇವ ದ್ವಿಜನ್ಮನಾಮ್ ।
ಶ್ರೀಪಾದಾನಾಂ ಮಠಂ ಗತ್ವಾ ವಾಚ್ಯಾ ಗ್ರಂಥವರಾ ಇತಿ ।
ರಘೂತ್ತಮಯತೇರೇವಮುಕ್ತ್ವಾ ಶ್ರೀಗಜಗಹ್ವರೇ ॥ – ಗುರುಚರ್ಯಾ

೨. ಮಹಾಸಂಸ್ಥಾನಮಖಿಲಂ ದತ್ವಾಽನುಗ್ರಹಪೂರ್ವಕಮ್ ।
ಮಣೂರಸ್ಥಾನಾತ್ಮಶಿಷ್ಯಾನ್ ವರದಾಚಾರ್ಯಭೂಸುರಾನ್ ॥
ಆಹೂಯ ದೇಹಪ್ರಕೃತಿಂ ಕಥಯಿತ್ವಾ ನಿಜಾಂ ತದಾ ।
ರಘೂತ್ತಮಮುನೇರ್ಗ್ರಂಥೋ ಭವದ್ಭಿಃ ಸಮ್ಯಗುಚ್ಯತಾಮ್ ॥
ಏವಮುಕ್ತ್ವಾ ಪಿಂಗಲಾಬ್ದೇ ಜ್ಯೇಷ್ಠಮಾಸೇ ಪರೇ ದಲೇ ।
ತೃತೀಯಾಯಾಂ ಭುವಂ ತ್ಯಕ್ತ್ವಾ ಗಜಕೋಣ್ಯಾಂ ಪರಂ ಯಯುಃ ॥
– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೧೧/೩೨-೩೪)

೩. ಇಂದು ನವವೃಂದಾವನವೆಂದು ಪ್ರಸಿದ್ಧವಾಗಿರುವ ಆನೆಗೊಂದಿಯ ಬಳಿಯ ನಡುಗಡ್ಡೆಯಲ್ಲಿ ಇರುವ ನವವೃಂದಾವನಗಳಲ್ಲಿ ಶ್ರೀರಘುವರ್ಯತೀರ್ಥರದೂ ಒಂದು. ಇದನ್ನು ಶ್ರೀಜಗನ್ನಾಥದಾಸರೂ ತಮ್ಮ ಕೃತಿಯೊಂದರಲ್ಲಿ ಉಲ್ಲೇಖಿಸಿರುವರು :

ವೃಂದಾವನಗಳಿಗಾನಮಿಪೆ ನಿತ್ಯನಂದತೀರ್ಥರ ಮತೋದ್ಧಾರಕರೆನಿಪರ ನವ ॥ ಪ ॥
ವರಮಧ್ವಮುನಿವಿಮಲಕರಪದ್ಮಸಂಜಾತ ಗುರುಪದ್ಮನಾಭ ಮಾಧವರಾಮರ ಕವೀಂದ್ರಾ
ಕರಸರೋರುಹ ಜಾತ ವಾಗೀಶಮುನಿಪ ರಘುವರ್ಯ ಗೋವಿಂದಾಖ್ಯ ಒಡೆಯರ ಪವಿತ್ರತಮ ॥ ೧ ॥
ಶ್ರೀಸುರೇಂದ್ರಾರ್ಯರ ಪೌತ್ರರೆನಿಪ ಸುಧೀಂದ್ರ ವ್ಯಾಸರಾಯ ಶ್ರೀನಿವಾಸಮುನಿಯಾ
ಭೂಸುರರು ಪರಮ ಸಂತೋಷದಲಿ ಸ್ಮರಿಸೆ ನಿರ್ದೋಷರನ ಮಾಡಿ ಅಭಿಲಾಷೆ ಪೂರೈಸುತಿಹ ॥ ೨ ॥

ಶ್ರೀಪದ್ಮನಾಭತೀರ್ಥರು, ಅನಂತರ ಕಾಲದ ಶ್ರೀಕವೀಂದ್ರ ತೀರ್ಥರು ಹಾಗೂ ಶ್ರೀವಾಗೀಶ-ತೀರ್ಥರು ಮತ್ತು ವಿಶ್ವಖ್ಯಾತಿಯ ಶ್ರೀವ್ಯಾಸರಾಜರ ವೃಂದಾವನಗಳು ವಿರಾಜಿಸುತ್ತಿದ್ದವು. ಶ್ರೀರಘುವರ್ಯತೀರ್ಥರದು ಐದನೆಯ ವೃಂದಾವನವಾಯಿತು. ಇವುಗಳಲ್ಲದೆ ಆನೆಗೊಂದಿಯ ನದೀತೀರದ ರಾಜವಾಡೆ ಎಂಬಲ್ಲಿ ಶ್ರೀವ್ಯಾಸರಾಜರು ಶ್ರೀನಾರಾಯಣತೀರ್ಥರಿಂದ ಪ್ರತಿಷ್ಠಾಪಿಸಿದ್ದ ಶ್ರೀಮಾಧವ ತೀರ್ಥರು, ಶ್ರೀಅಕ್ಷೋಭ್ಯತೀರ್ಥರು ಹಾಗೂ ಶ್ರೀಜಯತೀರ್ಥರ ಮೃತ್ತಿಕಾವೃಂದಾವನಗಳು ಸಹ ಇದ್ದವು.

ಅನಂತರ ಶ್ರೀವರದರಾಜಾಚಾರ್ಯರು ಗುರುಗಳ ಆದೇಶದಂತೆ ಅಧ್ಯಯನಕ್ಕಾಗಿ ಶ್ರೀರಘೂತ್ತಮರನ್ನು ಮಣೂರಿಗೆ ಆಹ್ವಾನಿಸಿದರು. ಅಲ್ಲೊಬ್ಬ ದಳಪತಿ. ವರದರಾಜಾ-ಚಾರ್ಯರಲ್ಲಿ ಗುರುಭಾವನೆ ಇರಿಸಿದ್ದ ಅಧಿಕಾರಿ. ಅಧಿಕಾರಕ್ಕೆ ತಕ್ಕಂತೆ ಗತ್ತು, ವೈಭವಗಳನ್ನು ರೂಢಿಸಿಕೊಂಡಿದ್ದ ದುರಹಂಕಾರಿ. ಶ್ರೀರಘೂತ್ತಮರದು ಸನ್ಯಾಸಸಹಜವಾದ ನಿರಾ-ಡಂಬರವ್ಯಕ್ತಿತ್ವ. ತೊಟ್ಟ ಶಾಟಿ, ಹಿಡಿದ ದಂಡ – ಇಷ್ಟೇ ಅವರ ಪರಿಕರ. ಅವರ ವೇಷ ಕಂಡ ಅವನಿಗೆ ಅವರ ಬಗ್ಗೆ ಅಸಡ್ಡೆ ಉಂಟಾಯಿತು. ವೇಷಭೂಷಣಗಳಿಂದ ಯೋಗ್ಯತೆ ಅಳೆಯುವ ಜನರ ರೀತಿ ಅಂತಹುದೇ. ವರದರಾಜಾಚಾರ್ಯರದು ಶಾಲುಶಕಲಾತಿಗಳನ್ನು ಧರಿಸಿದ್ದ ವೈಭವದ ವ್ಯಕ್ತಿತ್ವ; ಬೆರಳಲ್ಲಿ ಉಂಗುರಗಳು, ಕಂಗೊಳಿಸುವ ಕರಣಾಭರಣ, ತೊಟ್ಟಿದ್ದ ಚಿನ್ನದ ಸರಗಳು – ಅದು ದೋಷವಲ್ಲವಾದರೂ, ದಳಪತಿಗೆ ಅವುಗಳು ಮಾತ್ರವೇ ಗುಣಗಳೆನ್ನಿಸಿದ್ದವು. ಇದರಿಂದಾಗಿ ಯತಿವರ್ಯರಾದ ಶ್ರೀರಘೂತ್ತಮರಿಗಿಂತ ಶ್ರೀವರದರಾಜಾಚಾರ್ಯರೇ ಮಿಗಿಲೆಂಬ ಭಾವ ಅವನಲ್ಲಿ ಮನೆಮಾಡಿತು. ಅವರಿಬ್ಬರಲ್ಲಿನ ವಯಸ್ಸಿನ ಅಂತರ ಅದಕ್ಕೆ ಪೋಷಕವಾಯಿತು.

ಶ್ರೀಪಾದರು ನೆಲೆಸಿದ್ದ ಮಠಕ್ಕೆ ಆಗಮಿಸಿ, ಶ್ರೀವರದರಾಜಾಚಾರ್ಯರು ಪಾಠವನ್ನು ಆರಂಭಿಸಿದರು. ಆ ಊರಿನ ಜನರ ಮನೋಭಾವವೂ ಅಧಿಕಾರಿಯ ಮನೋಭಾವ-ದಂತೆಯೇ ಇತ್ತು – 'ಯಥಾ ರಾಜಾ ತಥಾ ಪ್ರಜಾಃ'. ಅವರೆಲ್ಲ ಅದನ್ನು ಬ್ಬಾಯಲ್ಲೂ ತೋರಿಸಿಬಿಟ್ಟರು. ಜನರ ವರ್ತನೆ ವರದರಾಜಾಚಾರ್ಯರಲ್ಲೂ ಪ್ರಭಾವ ಬೀರಿತು. ಅಹಂಕಾರ ಅವರ ಮನಸ್ಸನ್ನು ಆವರಿಸಿತು. ವಿನಯ ಮರೆಯಾಗಿ, ಅಹಂಕಾರ ಮೂಡಿತು. ಹಾಗೂ ಹೀಗೂ ಮೂರು ದಿನ ಕಳೆದವು. ನಾಲ್ಕನೆಯ ದಿನ ಅವರು ಮಠಕ್ಕೆ ಬಾರಲೇ ಇಲ್ಲ. ಅದನ್ನು ಗಮನಿಸಿದ ಶ್ರೀರಘೂತ್ತಮರು ವಿಚಾರಿಸಿದಾಗ ಅವರ ಕಡೆಯಿಂದ ಬಂದ ಉತ್ತರ ಅಚ್ಚರಿಯದಾಗಿತ್ತು. "ಬೇಕಿದ್ದರೆ ಅವರೇ ನಮ್ಮ ಬಳಿಗೆ ಬಂದು ಪಾಠ ಕಲಿಯಲಿ[೧]." ಶ್ರೀರಘೂತ್ತಮರಿಗೆ ಆ ಮಾತಿನ ಹಿಂದಿನ ಔದ್ಧತ್ಯ ಗಮನಕ್ಕೆ ಬಂದಿತು. ಆದರೂ ಅವರು ಅದನ್ನು ಲೆಕ್ಕಿಸದೆ ಶ್ರೀಮದಾನಂದತೀರ್ಥರ ಶಾಸ್ತ್ರದ ಅಧ್ಯಯನದ ಮೇಲಿನ ಕಾತರದಿಂದಾಗಿ ತಾವೇ ಅವರಲ್ಲಿಗೆ ಹೋಗುವುದೆಂದು ನಿಶ್ಚಯಿಸಿದರು. ಸಾತ್ತ್ವಿಕರ ಪರಿ ಇಂತಹುದು.

---

೧. ತತೋ ವರದರಾಜಾರ್ಯೋ ಮಠಂ ಗಂತುಂ ನ ಚೈಚ್ಛತ।
ಉವಾಚ ತಾನ್ ಸ್ಮಯಾವಿಷ್ಟೋ ಧಿಕ್ಕೃತ್ಯ ಸ್ವಗುರೋರ್ವಚಃ।
ನಾಹಂ ವಕ್ತುಂ ಮಠಂ ಯಾಸ್ಯೇ ಆಯಾತ್ವಸ್ಮದ್ಗೃಹಾನಿತಿ। – ಗುರುಚರ್ಯಾ

ಜ್ಞಾನಾರ್ಜನೆಯ ಮುಂದೆ ಉಳಿದೆಲ್ಲವೂ ಅವರಿಗೆ ಗೌಣ ; ಜ್ಞಾನಾರ್ಜನೆಯೇ ಗೌಣ-ವಾದವರಿಗೆ ಪ್ರತಿಷ್ಠೆಯೇ ಪ್ರಧಾನ.

ಶ್ರೀರಘೂತ್ತಮರೇ ವರದರಾಜಾಚಾರ್ಯರಲ್ಲಿಗೆ ಬಂದಿದ್ದು ಅವರ ವಿನಯ ಎಂಬುದನ್ನು ಗ್ರಹಿಸದ ದಳಪತಿ ಮೊದಲಾದವರು,ಅದನ್ನು ಅವರ ದೌರ್ಬಲ್ಯವೆಂದು ತಪ್ಪಾಗಿ ಗ್ರಹಿಸಿದರು. ಅದನ್ನು ತಮ್ಮ ಕೃತಿಗಳ ಮೂಲಕ ತೋರಿಸುತ್ತಲೂ ಇದ್ದರು. ಆದರೂ ಶ್ರೀರಘೂತ್ತಮರದು ಅಪ್ರತಿಮವಾದ ಅಧ್ಯಯನಕಾತರ. ಆ ಸ್ಥಿತಿಯಲ್ಲೂ ಅವರು ವರದರಾಜಾಚಾರ್ಯರ ಮನೆಗೆ ಹೋಗಿ ಅಧ್ಯಯನ ಮಾಡುವುದನ್ನು ಮುಂದುವರೆಸಿದರು.

ಆಗೊಮ್ಮೆ ವಿಚಿತ್ರಪ್ರಸಂಗವೊಂದು ನಡೆಯಿತು. ಅದೊಂದು ಸಾಧನೀದ್ವಾದಶಿಯ ದಿನ. ಅಂದು ತಮ್ಮಲ್ಲಿಗೇ ಪಾರಣೆಗೆ ಆಗಮಿಸಲು ದಳಪತಿ ಹಾಗೂ ವರದರಾಜಾಚಾರ್ಯರ ಆಗ್ರಹ. ಎಂದಿನಂತೆ ಶ್ರೀಪಾದರದು ಮೃದುವರ್ತನೆ. ಅನುಗ್ರಹಬುದ್ಧಿಯ ಅಂಗೀಕಾರ. ಆಗಿನ್ನೂ ಭಿಕ್ಷೆಯ ಸ್ಥಳದಲ್ಲೇ ಪೂಜೆಯ ಪರಿಪಾಠ ಬಂದಿರಲಿಲ್ಲ. ಮಠದಲ್ಲಿ ಪೂಜೆ, ಭಿಕ್ಷೆಯಿಂದ ಭೋಜನ ಎಂಬ ವಿಧಿ ಆ ಕಾಲದ ರೀತಿ. ಅದರಂತೆ ಶ್ರೀಪಾದರು ಮಠದಲ್ಲಿ ಪೂಜೆ ಮುಗಿಸಿ, ಭಿಕ್ಷೆಗೆಂದು ಅವರ ಬಳಿಗೆ ತೆರಳಿದರು. ಹಾಗೆ ಸಂಸ್ಥಾನಪೂಜೆ ಪೂರೈಸಿ ತೆರಳುವಲ್ಲಿ ಅನಿವಾರ್ಯವಾಗಿ ಸ್ವಲ್ಪ ವಿಳಂಬವೂ ಆಯಿತು. ಆದರೆ ಇದಾವುದರ ಪರಿವೆಯೂ ಇಲ್ಲದ ಅವರಿಬ್ಬರೂ ವಿಳಂಬವಾಗಬಾರದೆಂದು ಪಾರಣೆಗೆ ತೊಡಗಿಬಿಟ್ಟಿದ್ದರು. ಅವರಿಗೆ ಸಕಾಲಕ್ಕೆ ಪಾರಣೆ ಎಂಬ ವಾಕ್ಯ ಗಮನಕ್ಕೆ ಬಂದಂತೆ, ಅತಿಥಿಗಳನ್ನು ಬಿಟ್ಟು ಭೋಜನಮಾಡಬಾರದೆಂಬ ವಾಕ್ಯ ಗಮನಕ್ಕೆ ಬಾರದೇಹೋಯಿತು. ಅಂತಹ ಸಮಯದಲ್ಲಿ ಭಾಗವತದಲ್ಲಿ ಅಂಬರೀಷರಾಜನು ಅತಿಥಿ-ಗಳಾದ ದುರ್ವಾಸರಿಗಾಗಿ ಕಾಯುತ್ತಾ ಪಾರಣೆ ಮಾಡದೆ, ಜಲಪ್ರಾಶನ ಮಾಡಿದ ನಿರೀಕ್ಷೆಯಲ್ಲಿದ್ದ ಪ್ರಸಂಗ ಅವರ ಗಮನಕ್ಕೆ ಬರಬೇಕಾಗಿತ್ತು. ದೈವಸಂಕಲ್ಪ ! ಆಗಬಾರದ್ದು ಆಗಿಯೇ ಹೋಯಿತು. ಶ್ರೀರಘೂತ್ತಮರು ಬರುವ ವೇಳೆಗಾಗಲೇ ಅವರು ಆಪೋಶನ ತೆಗೆದುಕೊಂಡಾಗಿತ್ತು. ಅದನ್ನು ಗಮನಿಸಿದ ಶ್ರೀಪಾದರು ಮನೆಯೊಡತಿಯ ಪ್ರಾರ್ಥನೆಯಂತೆ ಅವಳು ನೀಡಿದ ಫಲದಿಂದ ಪಾರಣೆ ಪೂರೈಸಿ, ಮಠಕ್ಕೆ ತೆರಳಿದರು. ಅವರಿಬ್ಬರು ಮಾತ್ರ ಇದಾವುದರ ಪರಿವೆಯೂ ಇಲ್ಲದೆ ತಾವು ಮಾಡಿದ ಅಪರಾಧದ ಪ್ರಜ್ಞೆಯೂ ಇಲ್ಲದೆ, ಪಾರಣೆ ಪೂರೈಸಿ, ಇತರ ಕಾರ್ಯಗಳಲ್ಲಿ ಮಗ್ನರಾಗಿಬಿಟ್ಟರು.

ಇತ್ತ ಮಠಕ್ಕೆ ಮರಳಿದ ಶ್ರೀರಘೂತ್ತಮರು ಚಿಂತಿಸತೊಡಗಿದರು: ''ಇದು ಕೇವಲ ನಮಗಾದ ಅವಮಾನವಲ್ಲ, ನಮ್ಮ ಆಶ್ರಮ ಹಾಗೂ ಪೀಠಗಳಿಗೆ ಆಗಿರುವ ಅಪಚಾರ. ಈ ಪರಿಸ್ಥಿತಿಯಲ್ಲಿ ಮತ್ತೊಮ್ಮೆ ಅಲ್ಲಿಗೆ ತೆರಳಿ ಪಾಠ ಕೇಳುವುದು ತರವಲ್ಲ. ಈವರೆಗಿನ ಅವಜ್ಞೆ ಒಂದು ಪರಿಮಿತಿಯಲ್ಲಿತ್ತು; ಈಗದು ಮಿತಿಮೀರಿದೆ. ಅವರಂತೂ ಮಠಕ್ಕೆ ಬಂದು ಪಾಠ ಹೇಳಲಾರರು. ಪಾಠವಿಲ್ಲದ ಬದುಕು ವ್ಯರ್ಥ. ಯತಿಗಳೂ, ಪೀಠಾಧೀಶರೂ ಆದ ನಮಗಂತೂ ಅದು ನಿತ್ಯದ[೧] ಪ್ರಮುಖವಿಧಿ. ಮುಂದೇನು ಮಾಡುವುದು? ಶ್ರೀಹರಿಗುರುಗಳೇ

೧. ಬುಧೋಽಭಿಧಾನಂ ಶ್ರವಣಂ ಬುಧೇತರೋ ಧ್ರುವಂ ವಿದಧ್ಯಾದ್ವಿಮುಮುಕ್ಷುರಾತ್ಮನಃ।
ಯತಿರ್ವಿಶೇಷಾತ್.................................॥ – ಸುಮಧ್ವವಿಜಯ (೪/೪೭)

ಇದಕ್ಕೆ ದಾರಿತೋರಬೇಕು. ನಮ್ಮ ಗುರುಗಳು ವೈಕುಂಠಯಾತ್ರೆ ಮಾಡುವ ಮುನ್ನ ನಮಗೆ ಅನೇಕ ಸಲ ಹೇಳಿದ್ದುಂಟು. 'ಇಂದಿನ ಜನತೆ ಅಷ್ಟೇನೂ ವಿಶ್ವಾಸಾರ್ಹವಾದುದಲ್ಲ. ಧನಾದಿಗಳನ್ನು ಸಾಧನವೆಂದು ಬಗೆಯುವ ಬದಲು, ಈ ಜನ ಅದನ್ನು ಪ್ರತಿಷ್ಠೆಯ ಸಂಕೇತ-ವನ್ನಾಗಿ ಭಾವಿಸಿರುವರು. ಇವರದೇನಿದ್ದರೂ ತೋರಿಕೆಯ ಗೌರವ. ಅವರಿಗೆ ನಿಜಕ್ಕೂ ಬೇಕಿರುವುದು ಸ್ವಪ್ರತಿಷ್ಠೆಯಷ್ಟೆ. ಧರ್ಮ ಬಿಟ್ಟು ಬದುಕುವ ಜನರೇ ಬಹಳ. ಧರ್ಮ ಹಿಡಿದವರಲ್ಲೂ ನಿಷ್ಕಪಟಿಗಳ ಸಂಖ್ಯೆ ತುಂಬಾ ಕಡಿಮೆ. ಯೋಗ್ಯಜನರೂ ಇರುವರಾದರೂ, ಅವರ ಸಂಖ್ಯೆ ಬಹಳ ಕಡಿಮೆ. ಹೀಗಿದ್ದರೂ ನಾವು ನಮ್ಮ ಕರ್ತವ್ಯವಾದ ತತ್ತ್ವಬೋಧೆ, ತತ್ತ್ವಪ್ರಸಾರಗಳನ್ನು ತೊರೆಯುವಂತಿಲ್ಲ. ವೇದಾಂತಪೀಠಗಳು ಇರುವುದೇ ಅದಕ್ಕೋಸ್ಕರ. ಅದಕ್ಕಾಗಿ ಪೀಠಗಳನ್ನು ಜನ ಗೌರವದಿಂದ ಕಾಣುವಂತಾಗಬೇಕು. ಪೀಠಾಧೀಶರಾದ ನಮ್ಮ ಸರಳಜೀವನವನ್ನು ಈ ಧನಿಕವರ್ಗ ದೈನ್ಯವೆಂದು, ದೌರ್ಬಲ್ಯವೆಂದು ತಪ್ಪಾಗಿ ಭಾವಿಸಿದೆ. ನಮ್ಮ ಕಾಲ್ನಡಿಗೆಯ ಸಂಚಾರ, ಬಾಹ್ಯಾಡಂಬರವಿಲ್ಲದ ಸ್ವಚ್ಛಬದುಕು, ಭಿಕ್ಷೆಯಿಂದಷ್ಟೇ ಜೀವನ – ಇವುಗಳೆಲ್ಲ ಇವರಿಗೆ ತಿರಸ್ಕಾರದ ಕಾರಣಗಳಾಗಿವೆ. ಆದ್ದರಿಂದ ನೀವು ಇನ್ನು ಮುಂದೆ ಮಠವನ್ನು ರಾಜ್ಯವೈಭವದ ಸಂಸ್ಥಾನದಂತೆ ಪರಿವರ್ತಿಸಬೇಕು. ಅದಕ್ಕಾಗಿ ಆನೆ, ಕುದುರೆ, ಮೇನೆ, ಧನಕನಕ ಮೊದಲಾದ ಸಕಲವೈಭವಗಳನ್ನೂ ಸಂಪಾದಿಸಬೇಕು. ಈ ಧನಮದಾಂಧ ಜನ ಅದನ್ನು ಕಂಡು ಅಚ್ಚರಿಯಿಂದ ಮಣಿಯುವಂತಾಗಬೇಕು'. ಗುರುಗಳು ಯಾವ ಹಿನ್ನೆಲೆಯಲ್ಲಿ ಈ ಮಾತುಗಳನ್ನಾಡಿದ್ದರೆಂಬುದು ನಮಗೀಗ ಮನವರಿಕೆಯಾಗುತ್ತಿದೆ'.

ಹೀಗೆ ಚಿಂತಿಸುತ್ತಲೇ ರಾತ್ರಿ ಕಳೆಯತೊಡಗಿತು. ಅರುಣೋದಯಕಾಲ ಸಮೀಪಿಸುವ ಸಮಯ. ಆಗೊಂದು ವಿಚಿತ್ರ ಸ್ವಪ್ನ. ಗುರುಗಳಾದ ರಘುವರ್ಯರು ದರ್ಶನ ನೀಡಿ[೧], ನುಡಿದರು – "ರಘೂತ್ತಮರೇ ! ಚಿಂತಿಸಬೇಡಿ. ಬೆಳಗಾಗುತ್ತಲೆ ನೀವು ಸ್ನಾನ ಪೂರೈಸಿ, ವ್ಯಾಸಪೀಠದ ಮುಂದೆ ಕುಳಿತು ಪಾಠ ಹೇಳಲು ಪ್ರಾರಂಭಿಸಿರಿ. ವಿಷಯ ನೀವು ವರದ-

---

೧. ಪ್ರಾಪ್ತಾಽಸ್ಮಾಭಿರವಸ್ಥೇಯಮಿತಿಚಿಂತಾಪರಾಯಣಃ ।
ನಿದ್ರಾಂ ಲೇಭೇ ಕ್ಷಣಂ ತತ್ರ ತದ್ಗುರುಃ ಸ್ವಪ್ನಗೋಽಬ್ರವೀತ್ ।
ಅಹಂ ವಕ್ಷ್ಯೆಖಿಲಂ ಶಾಸ್ತ್ರಂ ವದ ಶಿಷ್ಯಾನ್ ಯಥೇಪ್ಸಿತಮ್ ।
ನಾತ್ರ ಖೇದಸ್ತ್ವಯಾ ಕಾರ್ಯಃ ಸದಾ ಸನ್ನಿಧಿಗೋಽಸ್ಮ್ಯಹಮ್ ॥ – ಗುರುಚರ್ಯಾ

ಏವಂ ಚಿಂತಾಸಮಾಪನ್ನಾ ನಿದ್ರಯಾ ಚ ವಶೀಕೃತಾಃ ।
ತತಃ ಸ್ವಪ್ನೇಽವದಂಸ್ತ್ವೇತಾನಾಶ್ವಾಸ್ಯ ಗುರುಶೇಖರಾಃ ॥
ಅಹೋ ಭವಂತಃ ಶ್ವಃ ಪ್ರಾತಃ ಸ್ನಾತ್ವಾ ಶ್ರೀಶಕೃಪಾಬಲಾತ್ ।
ಅಗ್ರೇ ವರದರಾಜೇಭ್ಯೋ ಯದಧ್ಯೇಯಂ ತದೇವ ಹಿ ॥
ವಾಚ್ಯಂ ಭವದ್ಭಿಃ ಶಿಷ್ಯೇಭ್ಯೋಽಶ್ರುತಮಪ್ಯಸ್ಮದಾಜ್ಞಯಾ ।
ಸುದುರ್ಬೋಧೋಽಪಿ ವಾಕ್ಯಾರ್ಥೋ ವಿದಿತೋ ವೋ ಭವಿಷ್ಯತಿ ॥
ಇತ್ಥಂ ಸ್ವಪ್ನೇ ಗುರುವಚಃ ಶ್ರುತ್ವೋತ್ಥಾಯಾತಿಹರ್ಷಿತಾಃ ।
ಶಿಷ್ಯಾನಾಹೂಯ ವ್ಯಾಖ್ಯಾನಂ ವಕ್ತುಮಾರೇಭಿರೇ ತದಾ ॥

– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೧೨/೧೪-೧೭)

ರಾಜಾಚಾರ್ಯರಲ್ಲಿ ಅಧ್ಯಯನ ಮಾಡುತ್ತಿರುವ ಗ್ರಂಥವೇ ಆಗಿರಲಿ. ಅದನ್ನೇ ನೀವು ಮಠದಲ್ಲಿನ ಶಿಷ್ಯರಿಗೆ ವಿವರಿಸತೊಡಗಿರಿ. ನಮ್ಮ ಅನುಗ್ರಹದಿಂದ ಅತ್ಯಂತಕಠಿಣವಾಕ್ಯದ ಅರ್ಥವೂ ನಿಮಗೆ ಸ್ಪಷ್ಟವಾಗಿ ತಿಳಿಯುವುದು''.

ಸ್ವಪ್ನ ಕಳೆಯಿತು. ರಘೂತ್ತಮರ ಚಿಂತೆಯೂ ಕಳೆಯಿತು. ಒಂದೆಡೆ ಗುರುದರ್ಶನದ ಸಂಭ್ರಮ; ಮತ್ತೊಂದೆಡೆ ಜ್ಞಾನಾರ್ಜನೆಯ ಬಗೆಗಿನ ಚಿಂತೆಯ ಪರಿಹಾರ. ಮುಂದೆ ಗುರುಗಳು ಹೇಳಿದಂತೆಯೇ ಮಾಡಿದರು. ಸ್ನಾನ ಪೂರೈಸಿ, ಪಾಠಕ್ಕೆ ಕುಳಿತು ಶಿಷ್ಯರನ್ನು ಕರೆದರು. ಪಾಠ ಕೇಳಲು ತೆರಳಬೇಕಿದ್ದ ಗುರುಗಳು ಪಾಠ ಹೇಳಲೆಂದು ಕುಳಿತಿರುವುದನ್ನು ಕಂಡು ಅವರಿಗೂ ಅಚ್ಚರಿಯೇ. ಗುರ್ವಾಜ್ಞೆಯಂತೆ ಅವರು ಆಲಿಸಲು ಕುಳಿತರು. ಗುರುಗಳು ನುಡಿದಂತೆಯೇ ನಡೆಯಿತು. ಓದುತ್ತಲೇ ವಾಕ್ಯಗಳ ಅರ್ಥ ಸ್ಫುರಿಸತೊಡಗಿತು. ಅವರ ಸ್ಪಷ್ಟ ವಿವರಣೆ ಶಿಷ್ಯರನ್ನು ಚಕಿತಗೊಳಿಸಿತು. ಅವರಿಗೆಲ್ಲ ಅಪೂರ್ವಪಾಠ ಕೇಳಿದ ಅನುಭವ.

ದಿನಗಳು ಉರುಳತೊಡಗಿದವು. ರಘೂತ್ತಮರು ಪಾಠಕ್ಕೆ ಎಂದಿನಂತೆ ಬರುವರೆಂಬ ತಮ್ಮ ನಿರೀಕ್ಷೆ ಸುಳ್ಳಾದಾಗ ವರದರಾಜಾಚಾರ್ಯರಿಗೆ ಅಚ್ಚರಿ ಎನ್ನಿಸಿತು. ವಿಚಾರಿಸಿದಾಗ ಮುಂದೆಂದೂ ಅವರು ತಮ್ಮಲ್ಲಿಗೆ ಪಾಠಕ್ಕೆ ಬರಲಾರರು ಎಂಬುದೂ ತಿಳಿಯಿತು. ಅದರೊಂದಿಗೆ ಅವರೇ ಸ್ವತಃ ಪಾಠ ಹೇಳಲು ತೊಡಗಿದ್ದ ವಿಚಾರವೂ ತಲುಪಿತು. ಹತ್ತು ವರ್ಷದ ಆಸುಪಾಸಿನ ಬಾಲಕ ತತ್ತ್ವಪ್ರಕಾಶಿಕೆಯಂತಹ ಗ್ರಂಥವನ್ನು ಪಾಠ ಹೇಳುವ ವಿಷಯ ನಂಬಲು ಅಸಾಧ್ಯವೆನ್ನಿಸಿತು. ಪರೀಕ್ಷಿಸಲು ಸಮಯವನ್ನು ನಿರೀಕ್ಷಿಸತೊಡಗಿದರು.

ದಿನಗಳು ಉರುಳತೊಡಗಿದವು. ಅದೊಂದು ದಿನ ರಘೂತ್ತಮರು ಎಂದಿನಂತೆ ದಿನಕೃತ್ಯವನ್ನು ಪೂರೈಸಿ, ರಾತ್ರಿಯಲ್ಲಿ ಮಾರನೆಯ ದಿನದ ಪಾಠ ಹೇಳುವ ಭಾಗದ ಪೂರ್ವಾವಲೋಕನಕ್ಕೆ ತೊಡಗಿದರು. ಅದೊಂದು ಕಡೆ ಅವರಿಗೆ ವಾಕ್ಯವೊಂದರ ಅರ್ಥ ದುರ್ಗಮವೆನ್ನಿಸತೊಡಗಿತು. ಇಡೀರಾತ್ರಿ ಯೋಚಿಸಿದರೂ, ಅದಕ್ಕೆ ಪರಿಹಾರ ಕಾಣ-ದಾಯಿತು. ಆ ಚಿಂತೆಯಲ್ಲೇ ಬೆಳಗಿನ ವೇಳೆ ಮತ್ತೊಮ್ಮೆ ಸ್ವಪ್ನದಲ್ಲಿ ಗುರುಗಳ ದರ್ಶನಭಾಗ್ಯ ಲಭಿಸಿತು. ''ರಘೂತ್ತಮರೇ ! ಚಿಂತೆ ಬೇಡ. ನಿಮ್ಮ ಸಮಸ್ಯೆಗೆ ಉತ್ತರ ನಾವು ತಿಳಿಸುವ ಗ್ರಂಥದ ಇಂತಹ ಪತ್ರದಲ್ಲಿದೆ. ಅದನ್ನು ನೋಡುತ್ತಲೇ ನಿಮಗೆ ಇದರ ಅರ್ಥ ಸ್ಫುರಿಸುವುದು. ಇದೋ ನಾವು ಅನುಗ್ರಹಿಸುತ್ತಿರುವೆವು. ಇಂತಹ ಸಮಸ್ಯೆ ನಿಮಗೆ ಮತ್ತೆಂದೂ ಬರದು. ನೀವು ಪಾಠ ಹೇಳಬಯಸುವ ಯಾವುದೇ ಗ್ರಂಥದ ಸಂಪೂರ್ಣ ಅರ್ಥ ನಿಮಗೆ ಅದನ್ನು ಕಾಣುತ್ತಲೇ ಆಗಿಬಿಡುವುದು''.

ರಘೂತ್ತಮರ ಆಗಿನ ಸಂಭ್ರಮಕ್ಕೆ ಮಿತಿ ಇಲ್ಲವಾಯಿತು. ''ಎಂತಹ ಅನುಗ್ರಹ ! ಇದಕ್ಕಿಂತ ಮಿಗಿಲಾದ ಸಿದ್ಧಿ ಯಾವುದು? ಅದಕ್ಕೆಂದೇ ಶಾಸ್ತ್ರಗಳು ಸಾರಿವೆ – ಗುರ್ವನುಗ್ರಹಕ್ಕೆ

---

೧. ಇತ್ಥಂ ಸ್ವಪ್ನೇ ಗುರುವಚಃ ಶ್ರುತ್ವೋತ್ಥಾಯಾತಿಹರ್ಷಿತಾಃ।
ಶಿಷ್ಯಾನಾಹೂಯ ವ್ಯಾಖ್ಯಾನಂ ವಕ್ತುಮಾರೇಭಿರೇ ತದಾ॥

– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೨/೧೭)

ಮಿಗಿಲಾದ ಸಾಧನವಿಲ್ಲ. ಅದನ್ನು ಪಡೆದ ಭಾಗ್ಯ ನಮ್ಮದು''. ಮುಂದಿನದು ಇತಿಹಾಸ. ಗುರುಗಳು ತಿಳಿಸಿದ್ದ ಗ್ರಂಥದಲ್ಲಿ ಅವರ ಸಮಸ್ಯೆಗೆ ಪರಿಹಾರ ದೊರಕಿತು. ಅದು ಮುಂದಿನ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಮುನ್ಸೂಚನೆಯೂ ಆಯಿತು.

ತತ್ತ್ವಪ್ರಕಾಶಿಕಾ ಪಾಠವು ಪೂರೈಸಿ, ನ್ಯಾಯಸುಧೆಯ ಪಾಠ ಪ್ರಾರಂಭವಾಯಿತು. ಅವರ ಪಾಠದ ವೈಭವ ಮನೆಮಾತಾಗತೊಡಗಿತು. ಮಠದ ವಿದ್ಯಾರ್ಥಿಗಳಲ್ಲದೆ, ಆ ಊರಿನ ಪಂಡಿತಸಮುದಾಯ ಆ ಅಚ್ಚರಿಯನ್ನು ಕಾಣಲೆಂದು ಧಾವಿಸತೊಡಗಿದರು. ಹಾಗೆ ಸಾಗಿದವರು ಅವರ ಪಾಠ ಕೇಳುವ ಮೂಲಕ ಅವರ ಶಿಷ್ಯತ್ವವನ್ನೇ ವಹಿಸಿಬಿಟ್ಟರು. ಇದೆಲ್ಲ ಕಾಲಕಾಲಕ್ಕೆ ವರದರಾಜಾಚಾರ್ಯರ ಕಿವಿಗೆ ಬೀಳುತ್ತಲೇ ಇತ್ತು. ಅವರಿಗಿನ್ನು ತಡೆಯದಾಯಿತು. ಅದೊಂದು ದಿನ ಅವರ ಪಾಠದ ವೈಭವವನ್ನು ಸ್ವತಃ ಪರೀಕ್ಷಿಸಲೆಂದು ಬೆಳಗಿನ ಸ್ನಾನವನ್ನು ಬೇಗ ಪೂರೈಸಿ, ಮಠಕ್ಕೆ ಧಾವಿಸಿದರು. ಯಾರಿಗೂ ತಿಳಿಯದಂತೆ ಏಕಾಂತದಲ್ಲಿ ನಿಂತು ರಘೂತ್ತಮರ ಪಾಠವನ್ನು ಕೇಳಿಸಿಕೊಳ್ಳತೊಡಗಿದರು. ಅಂದಿನ ಪಾಠದ ವಿಷಯವು ನ್ಯಾಯಸುಧೆಯ ತುಂಬಾ ಗಹನವಾದ ವಾಕ್ಯಾರ್ಥವೊಂದಾಗಿತ್ತು. '[೧]ಬಹುಲಂ ತಣಿ' ಎಂಬ ವಾಕ್ಯಕ್ಕೆ ಸಂಬಂಧಿಸಿದಂತೆ ಶ್ರೀಜಯತೀರ್ಥರು ನೀಡಿದ ವಿವರಣೆಯ ಭಾಗ ಅದಾಗಿತ್ತು. ವರದರಾಜಾಚಾರ್ಯರಂತಹ ವಿದ್ವಾಂಸರಿಗೂ ಅದು ಅಷ್ಟು ಸುಲಭವಾಗಿ ಸ್ಫುಟವಾಗುವಂತಹ ಭಾಗವಾಗಿರಲಿಲ್ಲ. ಆದರೆ ಅಚ್ಚರಿಯೋ ಅಚ್ಚರಿ ! ರಘೂತ್ತಮರ ವಿವರಣೆ ನಿರರ್ಗಳವಾಗಿ ಸಾಗಿತ್ತು. ಅಂತಹ ಜಟಿಲವಾಕ್ಯದ ಬಗ್ಗೆ ಮಧ್ಯೆ ಮಧ್ಯೆ ಶಿಷ್ಯರು ಕೇಳುತ್ತಿದ್ದ ಗಹನಪ್ರಶ್ನೆಗಳಿಗೂ ಸೂಕ್ತ ಉತ್ತರಗಳನ್ನು ತತ್ಕ್ಷಣವೇ ನೀಡುತ್ತಾ ಸುಧೆಯ ವಾಕ್ಯಗಳನ್ನು ವಿವರಿಸುತ್ತಿದ್ದ ರಘೂತ್ತಮರ ಪರಿ ವರದರಾಜಾಚಾರ್ಯರಿಗೆ ಹೊಸ ಪ್ರಪಂಚವೊಂದನ್ನು ಕಣ್ಣ ಮುಂದೆ ನಿಲ್ಲಿಸಿತು. ಸ್ವಭಾವತಃ ಸಾತ್ತ್ವಿಕರೂ, ಅತ್ಯುತ್ತಮಪಂಡಿತರೂ ಆಗಿದ್ದ ಅವರ ಮೇಲೆ ಅಂತಹ ಅಪೂರ್ವವಿದ್ವತ್ತು ಅಗಾಧಪರಿಣಾಮ ಬೀರಿತು ; 'ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್'. ಅದು ಕಲಿತು ಬಂದ ವಿದ್ಯೆಯಲ್ಲ; ಹರಿಗುರುಗಳ ಅನುಗ್ರಹದ ಅಪೂರ್ವಸಿದ್ಧಿ ಎಂದು ಮನವರಿಕೆಯಾಯಿತು. ಅವರ ಮನಸ್ಸಿಗೆ ಕವಿದಿದ್ದ ಮಂಕು[೨]

---

೧. ವ್ಯಾಖ್ಯಾತಾಽಶ್ರುತಶಾಸ್ತ್ರಂ ತಮನಮದಸಹೋಽಪಿ ವರದರಾಜಾಚಾರ್ಯಃ।
ಬಹುಲಂ ತಣೀತಿ ವಾಕ್ಯೇ ಸಂಜ್ಞಾ ತಣ್ಣಿತಿ ಪರೀಕ್ಷ್ಯ ಕಥಯಂತಮ್ ॥ – ಸತ್ಯನಿಧಿವಿಲಾಸಃ (೩/೩೦)

೨. ತಾನ್ ದೃಷ್ಟ್ವಾ ವರದರಾಜಾರ್ಯೋ ಪಾಂಡಿತ್ಯಮದಗರ್ವಿತಃ।
ಸುಧಾವ್ಯಾಖ್ಯಾನಸಮಯೇ ಸರ್ವಂ ವ್ಯಕ್ತೀಭವಿಷ್ಯತಿ।
ತದ್ದಿನೇ ವರದರಾಜಾರ್ಯೋ ಬಹಿರ್ಲೀನೋಽಖಿಲಂ ಶೃಣೋತ್ ।
ಸ್ವಾಷ್ರುತಾರ್ಥಾನ್ ಬ್ರುವಾಣಂ ತಂ ಮಧ್ವಸಿದ್ಧಾಂತಸಮ್ಮತಾನ್ ।
ಶ್ರುತ್ವಾ ಭಯಾಕುಲಃ ಪಶ್ಚಾತ್ ಗತ್ವಾಽಽಶು ಗುರುಸನ್ನಿಧಿಮ್ ।
ಸ್ತುತ್ವಾ ಪರಮಯಾ ಭಕ್ತ್ಯಾ ಸಾಷ್ಟಾಂಗಂ ಪ್ರಣನಾಮ ಸಃ ॥ – ಗುರುಚರ್ಯಾ

ತಸ್ಮಿನ್ ದಿನೇ ತೇ ವರದಾಚಾರ್ಯಾಃ ಸ್ನಾತ್ವಾಽತಿಶೀಘ್ರತಃ।
ಮಠಮೇತ್ಯ ಬಹಿಃ ಸ್ಥಿತ್ವಾ ವ್ಯಾಖ್ಯಾನಮಥ ಶುಶ್ರುವುಃ ॥
ತದಾ ಸುದುರ್ಬೋಧವಾಕ್ಯೇ ತ್ವಾಗತೇ ತೇ ರಘೂತ್ತಮಾಃ।

ಅಳಿಯಿತು. ಸಂತೋಷಭರಿತರಾಗಿ ಸರಸರನೆ ಮಠದೊಳಕ್ಕೆ ಧಾವಿಸಿ, ರಘೂತ್ತಮರ ಬಳಿ ತೆರಳಿ, ಒಂದಾದ ಮೇಲೆ ಒಂದರಂತೆ ನಮಸ್ಕಾರಗಳನ್ನು ಅರ್ಪಿಸತೊಡಗಿದರು. ಕೈಜೋಡಿಸಿಕೊಂಡು ತಮ್ಮಿಂದಾದ ಅಪರಾಧವನ್ನು ಮನ್ನಿಸಲು ಪ್ರಾರ್ಥಿಸಿಕೊಂಡರು. ತಮ್ಮನ್ನು ಸಹ ಶಿಷ್ಯನನ್ನಾಗಿ ಪರಿಗ್ರಹಿಸಿ, ಉದ್ಧರಿಸಲು ಬೇಡಿಕೊಂಡರು.

ರಘೂತ್ತಮರದು ಪರಿಪಕ್ವಪಾಂಡಿತ್ಯವಾಗಿದ್ದಂತೆ, ಪರಿಪಕ್ವಸಾಧನೆಯೂ ಆಗಿದ್ದಿತು. ಅದರ ಫಲವಾಗಿ ವರದರಾಜಾಚಾರ್ಯರಿಂದಾಗಿದ್ದ ಅಪಚಾರವನ್ನು ಮನ್ನಿಸಿ, ಅವರನ್ನು ಪ್ರೀತಿಯಿಂದ ಪರಿಗ್ರಹಿಸಿದರು. ಒಂದು ಕಾಲದ ಶಿಷ್ಯನನ್ನು ಗುರುವೆಂದಾರಾಧಿಸಿ, ತಮ್ಮ ಜೀವನ ಪಾವನ ಮಾಡಿಕೊಳ್ಳುವ ಅಪರೂಪದ ವ್ಯಕ್ತಿಗಳ ಸಾಲಿಗೆ ವರದರಾಜಾಚಾರ್ಯರು ಸೇರಿದರು.

ಶ್ರೀರಘೂತ್ತಮರ ಪಾಠಪ್ರವಚನ ದೈವಿಕಹಿನ್ನೆಲೆಯಲ್ಲಿ ವಿನೂತನಕ್ರಾಂತಿಯನ್ನೇ ಮಾಡಿತು. ಅವರ ಶಿಷ್ಯಸಂಪತ್ತು ಅಪಾರವಾಗಿ ಬೆಳೆಯಿತು. ಹಾಗೆ ಸಿದ್ಧರಾದ ಶಿಷ್ಯರು ಅಸಾಮಾನ್ಯ-ಪಂಡಿತರಾಗಿ ಸಿದ್ಧಾಂತಪ್ರಸಾರದ ಕಾರ್ಯದಲ್ಲಿ ಬಗೆಬಗೆಯಲ್ಲಿ ತಮ್ಮನ್ನು ತೊಡಗಿಸಿ-ಕೊಂಡರು. ಅವರೆಲ್ಲ ನಾನಾಪ್ರದೇಶಗಳಿಗೆ ತೆರಳಿ, ಜಿಜ್ಞಾಸುಗಳಿಗೆ ಉದ್ಗ್ರಂಥಗಳ ಪಾಠಗಳನ್ನು ಹೇಳುತ್ತಾ ಅಪಾರಮನ್ನಣೆಗೆ ಪಾತ್ರರಾದರು.

ಶ್ರೀರಘೂತ್ತಮರು ಗುರುಗಳು ಆದೇಶಿಸಿದ್ದಂತೆ ಮಠವನ್ನು ರಾಜವೈಭವದಿಂದ ಮೆರೆಸುವ ಕಾರ್ಯಕ್ಕೆ ಕೈಹಾಕಿದರು. ಆವರೆಗೂ ಬಂದ ಪರಂಪರೆಯಂತೆ ಮಠದಲ್ಲಿ ಏನಿದ್ದರೂ ಪಾಠಪ್ರವಚನಗಳು ಮಾತ್ರ. ಅಡುಗೆಯ ವ್ಯವಸ್ಥೆಯೇ ಇರಲಿಲ್ಲ, ಭೋಜನಕ್ಕೆಂದು ಭಿಕ್ಷೆಗೆ ತೆರಳಿ, ಅದರಿಂದ ಲಭಿಸುವ ಅನ್ನದಿಂದಲೇ ಜೀವನನಿರ್ವಹಣೆ ಸಾಗಬೇಕಿತ್ತು. ಶ್ರೀರಘೂತ್ತಮರು ಅದನ್ನು ಸಂಪೂರ್ಣ ಬದಲಾಯಿಸಿ, ಮಠದಲ್ಲಿ ತಮ್ಮ ಭೋಜನಕ್ಕೆಂದು ಪ್ರತ್ಯೇಕ ಅಡುಗೆಯ ವ್ಯವಸ್ಥೆಯನ್ನು ಪ್ರಾರಂಭಿಸಿದರು. ಭಿಕ್ಷೆಯ ವ್ಯವಸ್ಥೆ ಯಾರದೇ ಇದ್ದರೂ, ಪಾಕಕಾರ್ಯ ಮಠದಿಂದಲೇ ಆಗಬೇಕು. ಅದನ್ನು ಭಗವಂತನಿಗೆ ನಿವೇದಿಸಿ, ಪ್ರಸಾದವನ್ನು ಸ್ವೀಕರಿಸಬೇಕು. ಮತ್ತೊಬ್ಬರಿಂದ ಸಿದ್ಧವಾದ ಆಹಾರವನ್ನು ಸರ್ವಾತ್ಮನಾ ತೊರೆಯಬೇಕು. ಇತರರಿಗೆಂದು ಪ್ರತ್ಯೇಕವಾದ ಅಡುಗೆಯವರು, ನೀರಿನವರು, ಬಡಿಸುವವರು ನಿಯಮಿತರಾದರು. ಶ್ರೀಗಳ ಕೋಣೆಯ ಮುಂದೆ ದ್ವಾರಪಾಲಕರು ನಿಯೋಜಿತರಾದರು. ಅವರ ಅನುಮತಿಯಿಂದಲೇ ದರ್ಶನಾಕಾಂಕ್ಷಿಗಳಿಗೆ ಪ್ರವೇಶ ಎಂಬ ನಿಬಂಧನೆಯೂ ಏರ್ಪಟ್ಟಿತ್ತು. ಮಠದ ಪ್ರಧಾನ ವಿದ್ವಾಂಸರು ತಮ್ಮ ತಮ್ಮ ಅಡುಗೆಯನ್ನು ಶ್ರೀಗಳ ಮುಂದೆ ಒಪ್ಪಿಸಿ, ಅವರು ಅದನ್ನು ದೇವರಿಗೆ ನಿವೇದಿಸಿ, ಕೊಟ್ಟ ಮೇಲೆ, ತಮ್ಮ ಪರಿವಾರದವರಿಂದ

---

ವಾಕ್ಯಾರ್ಥಮೂಚುರ್ನಿಃಶಂಕಾಃ ಶಿಷ್ಯೇಭ್ಯಃ ಸರ್ವಸಮ್ಮತಮ್ ॥
ತದಾಽಽಕರ್ಣ್ಯಾಥ ವರದಾಚಾರ್ಯಾಃ ಸಂತೋಷನಿರ್ಭರಾಃ।
ಪ್ರವಿಶ್ಯಾಂತರ್ಹ್ಯದಾ ತೇಭ್ಯೋ ನಮಸ್ಕಾರಾಂಶ್ಚ ಚಕ್ರಿರೇ ॥
ಯಯಾಚಿರೇಽಂಜಲಿಂ ಬದ್ಧ್ವಾ ಶ್ರೀಪಾದೇಭ್ಯೋ ದ್ವಿಜೋತ್ತಮಾಃ।
ಸಂಸ್ಥಾನದ್ರೋಹಮನಿಶಮಕಾರ್ಷಮಹಮಿತ್ಯಲಮ್ ॥

– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೧೨/೨೮-೩೧)

ಬಡಿಸಿಕೊಂಡು ಊಟಮಾಡುವ ಪದ್ಧತಿ ಜಾರಿಗೆ ಬಂತು. ಇಂತಹ ವ್ಯವಸ್ಥೆಯಿಂದ ಮಣ್ಣೂರಿನ ದಳಪತಿಯಂತಹವರ ಸೊಕ್ಕು ಇಳಿಯತೊಡಗಿತು. ಶ್ರೀಗಳು ಭಿಕ್ಷೆಗಾಗಿ ತಮ್ಮನ್ನು ಅವಲಂಬಿಸಿಲ್ಲ ಎಂಬ ಅರಿವು ಅವರಿಗಾಗುತ್ತಲೇ ತಾವೇ ಅವರನ್ನು ಒಲೈಸಬೇಕಾದ ಅನಿವಾರ್ಯತೆಯನ್ನು ಅವರೆಲ್ಲ ಮನಗಾಣತೊಡಗಿದರು.

ಇದರೊಂದಿಗೆ ಸಂಚಾರಕ್ರಮದಲ್ಲೂ ಗಮನಾರ್ಹಬದಲಾವಣೆಯನ್ನು ಅಳವಡಿಸಿದರು. ಆವರೆಗೂ ಸ್ವತಃ ಪೀಠಾಧೀಶರೇ ದೇವರ ಪೆಟ್ಟಿಗೆಯನ್ನು ಭುಜದ ಮೇಲಿರಿಸಿಕೊಂಡು ಕೈಲಿ ದಂಡಹಿಡಿದು, ಕಾಲ್ನಡಿಗೆಯಲ್ಲಿ ಸಂಚರಿಸುವ ರೂಢಿಯಿತ್ತು. ರಘೂತ್ತಮರು ಗುರ್ವಾಜ್ಞೆಯಂತೆ ಸಂಚಾರಕ್ಕೆ ಆನೆ, ಕುದುರೆ, ಮೇನೆಗಳನ್ನು ಏರ್ಪಡಿಸಿದರು. ವಂದಿ-ಮಾಗಧರು ಬಿರುದುಬಾವಲಿಗಳನ್ನು ಹಾಡುತ್ತಾ, ಮುಂದೆ ತೆರಳುವಂತೆ ಮಾಡಿದರು. ಪೀಠಾಧೀಶರ ಆಗಮನ ರಾಜಮಹಾರಾಜರ ಆಗಮನದ ವೈಭವವನ್ನು ಪಡೆದುಕೊಂಡಿತು. ಪೂಜಾವೈಭವವೂ ಬಗೆಬಗೆಯಲ್ಲಿ ಹೆಚ್ಚತೊಡಗಿತು. ಒಟ್ಟಾಗಿ ಗುರುಪೀಠಕ್ಕೆ ಹೊಸ ಬಗೆಯ ವರ್ಚಸ್ಸು ಉಂಟಾಗಿತ್ತು. ಎಂತಹ ಅಧಿಕಾರಿಗಳೂ, ಶ್ರೀಮಂತರೂ ತುಂಬಾ ಗೌರವದಿಂದ, ಭಯಭಕ್ತಿಯಿಂದ ವರ್ತಿಸುವ ಅನಿವಾರ್ಯ ಸನ್ನಿವೇಶ ಉಂಟಾಯಿತು.

ಇಂತಹ ವ್ಯವಸ್ಥೆ ಆ ವೇಳೆಗೆ ಶ್ರೀಶ್ರೀಪಾದರಾಜರಿಂದ ಅವರ ಸಂಸ್ಥಾನದಲ್ಲಿ ರೂಪು-ಗೊಂಡಿತ್ತು. ಅದನ್ನು ಅವರ ಶಿಷ್ಯವರೇಣ್ಯರಾದ ಶ್ರೀವ್ಯಾಸರಾಜರು ಅಳವಡಿಸಿಕೊಂಡಿದ್ದರು. ಅದರಿಂದಾಗಿ ಅವರ ಶಿಷ್ಯರಾದ ಶ್ರೀವಿಜಯೀಂದ್ರರು ತಮ್ಮ ಮಠದಲ್ಲೂ ಅದನ್ನು ರೂಢಿಗೆ ತರುವಂತಾಯಿತು. ಶ್ರೀವಾದಿರಾಜಸ್ವಾಮಿಗಳಿಂದಾಗಿ ಉಡುಪಿಯ ಮಠಗಳಲ್ಲೂ ಅಂತಹ ಬದಲಾವಣೆಯ ಗಾಳಿ ಬೀಸತೊಡಗಿತ್ತು.

## ಶ್ರೀರಘುಪತಿತೀರ್ಥರು

ಶ್ರೀರಘೂತ್ತಮರು ಆಗೊಮ್ಮೆ ತತ್ತ್ವಪ್ರಸಾರವನ್ನು ಇನ್ನೂ ವ್ಯಾಪಕಗೊಳಿಸಲು ಮತ್ತೊಂದು ಉಪಕ್ರಮವನ್ನು ಕೈಗೊಂಡರು. ಅವರ ಪೂರ್ವಾಶ್ರಮದ ಸಹೋದರಿಯ ಮಗ ಅವರಲ್ಲಿಯೇ ಅಧ್ಯಯನ ಮಾಡಿ, ಉತ್ತಮಪಾಂಡಿತ್ಯ ಸಂಪಾದಿಸಿದ್ದ; ವಯಸ್ಸು ಚಿಕ್ಕದಾಗಿದ್ದರೂ, ಸಾಧನೆ ಅಪಾರವಾಗಿತ್ತು. ಗುರುಗಳ ನಿರಂತರಸಂಪರ್ಕದಿಂದಾಗಿ ಜ್ಞಾನಭಕ್ತಿಗಳೊಂದಿಗೆ ವಿಷಯವಿರಕ್ತಿಯೂ ಪೂರ್ಣಮಟ್ಟದಲ್ಲಿ ಅವರಿಗೆ ಲಭಿಸಿತ್ತು. ಅದನ್ನು ಗಮನಿಸಿ, ಶ್ರೀರಘೂತ್ತಮರು ಅವರಿಗೆ ಶುಭಮುಹೂರ್ತವೊಂದರಲ್ಲಿ ಶ್ರೀರಘುಪತಿತೀರ್ಥರು ಎಂದು ಹೆಸರಿಟ್ಟು ಸನ್ನ್ಯಾಸವನ್ನು ನೀಡಿ, ವೇದಾಂತಪೀಠದಲ್ಲಿ ಅಭಿಷೇಕಿಸಿ, ಪಟ್ಟಾಭಿಷೇಕ ಮಾಡಿ, [೧]ಅಣುಸಂಸ್ಥಾನವನ್ನು ನೀಡಿದರು.

---

೧. ಅಥಾತ್ಮಭಾಗಿನೇಯಾಂಸ್ತೇ ಸಮಾಹೂಯ ರಘೂತ್ತಮಾಃ।
ದತ್ವಾ ತುರ್ಯಾಶ್ರಮಂ ತೇಭ್ಯೋ ನಾಮ್ನಾ ರಘುಪತೀನ್ ಜಗುಃ॥
ಅಭಿಷಿಚ್ಯಾಣುಸಂಸ್ಥಾನಂ ದತ್ವಾ ತೇಭ್ಯೋ ಗುರೂತ್ತಮಾಃ।
— ಪೂರ್ಣಬೋಧಗುರುವಂಶಕಥಾಕಲ್ಪತರು (೧೧/೪೩,೪೪)

ಉತ್ತಮವಿದ್ವಾಂಸರಾಗಿದ್ದ ಅವರನ್ನು ತತ್ತ್ವಪ್ರಸಾರ ಹಾಗೂ ವಾದಿಜಯಕ್ಕೆಂದು ಕಳುಹಿಸಿಕೊಟ್ಟರು. ತಾವು ಸ್ವತಃ ಮಾಡುವಂತೆ ವಿಷ್ಣುಸರ್ವೋತ್ತಮತ್ವಪ್ರತಿಪಾದನೆಯನ್ನು ಸಮರ್ಥರಾದ ಇತರರಿಂದಲೂ ಮಾಡಿಸುವುದು ಪ್ರತಿಯೊಬ್ಬ ಬ್ರಹ್ಮಜ್ಞಾನಿಯ ಕರ್ತವ್ಯ. ರಘೂತ್ತಮರ ಈ ಕಾರ್ಯ ಇಂತಹ ಆದರ್ಶಕಾರ್ಯವಾಯಿತು.

ಗುರುಗಳ ಆದೇಶವನ್ನು ಶಿರಸಾ ವಹಿಸಿ, ದಿಗ್ವಿಜಯಕ್ಕೆ ತೆರಳಿದ ಶ್ರೀರಘುಪತಿತೀರ್ಥರು ತಮ್ಮ ವಿದ್ಯಾವೈಭವ ಹಾಗೂ ಗುರ್ವನುಗ್ರಹಗಳಿಂದಾಗಿ ಅಪಾರಸಂಖ್ಯೆಯಲ್ಲಿ ವಾದಿಗಳನ್ನು ಜಯಿಸಿ, ದ್ವೈತವೇದಾಂತದುಂದುಭಿಯನ್ನು ಮೊಳಗಿಸಿದರು. ಆಗೊಮ್ಮೆ ಒಬ್ಬ ವಿಶಿಷ್ಟಾದ್ವೈತಪಂಥದ ವಿದ್ವಾಂಸರನ್ನು ವಾದಿಯೊಬ್ಬ ಸೋಲಿಸಿ, ಅವರಿಂದ ಅವರ ಬಳಿ ಇದ್ದ ಹನುಮದ್ಧ್ವಜ ಮತ್ತು ಗರುಡಧ್ವಜಗಳನ್ನು ತನ್ನ ವಶಮಾಡಿಕೊಂಡಿದ್ದನು. ಈ ವಿಷಯ ತಿಳಿದ ಶ್ರೀರಘುಪತಿತೀರ್ಥರು ಕೂಡಲೇ ಆ ವಾದಿಯನ್ನು ವಾದಕ್ಕೆ ಆಹ್ವಾನಿಸಿದರು. ವಿಜಯದಿಂದ ಬೀಗುತ್ತಿದ್ದ ಅವನನ್ನು ತಮ್ಮ ಅಸಾಧಾರಣಕೌಶಲದಿಂದ ಪರಾಭವಗೊಳಿಸಿದರು. ಸೋತ ಅವನು ತಾನು ಪಡೆದಿದ್ದ ಆ ಹನುಮದ್ಧ್ವಜ ಹಾಗೂ ಗರುಡಧ್ವಜಗಳನ್ನು ಅವರಿಗೆ ಒಪ್ಪಿಸಿದನು. ಅದರೊಂದಿಗೆ ತನ್ನ ಬಳಿ ಇದ್ದ ವಾದ್ಯ, ಆಂದೋಲಿಕ ಮೊದಲಾದ ಎಲ್ಲ ವೈಭವಗಳನ್ನು ಅವರಿಗೆ ಸಮರ್ಪಿಸಿ, ತೆರಳಿಬಿಟ್ಟನು. ಅನಂತರವೂ ಶ್ರೀರಘುಪತಿತೀರ್ಥರು ತಮ್ಮ ವಾದಿಜಯಕಾರ್ಯವನ್ನು ಮುಂದುವರೆಸಿ, ಅಪಾರಕೀರ್ತಿಶಾಲಿಗಳಾಗಿ ಗುರುಗಳ ಬಳಿಗೆ ಮರಳಿದರು. ಅವರು ತಮ್ಮ ಆದೇಶದಂತೆ ವಿಜಯಿಗಳಾಗಿ ಬಂದು, ಆ ಧ್ವಜಾದಿಸಮಸ್ತಸಂಪತ್ತನ್ನೂ ಸಮರ್ಪಿಸಿದ್ದನ್ನು ನೋಡಿ ಶ್ರೀರಘೂತ್ತಮರು ಅವರನ್ನು ವಿಶೇಷವಾಗಿ ಹರಸಿದರು. ಮುಂದೆಯೂ ಶ್ರೀರಘುಪತಿ ತೀರ್ಥರ ಸಿದ್ಧಾಂತಪ್ರಸಾರಕಾರ್ಯ ವಿಶೇಷವಾಗಿ ನಡೆಯಿತು. ಅಲ್ಲಿಗೆ ಅವರ ಅವತಾರಕಾರ್ಯ ಮುಗಿದಿತ್ತು ; ಅವರಿನ್ನೂ ಚಿಕ್ಕಪಟ್ಟದಲ್ಲಿದ್ದಾಗಲೇ [೧]ವೈಕುಂಠಯಾತ್ರೆಯನ್ನು ಮಾಡಿದರು.

---

೧. ಮುದಾ ದಿಗ್ವಿಜಯಾರ್ಥಂ ತಾನ್ ಪ್ರೇಷಯಾಮಾಸುರಾದರಾತ್ ॥
ತದಾ ರಾಮಾನುಜಂ ಕಶ್ಚಿದ್ವಾದೀ ಜಿತ್ವಾ ಪ್ರಸಂಗತಃ।
ಆಜಹಾರ ತದೀಯೌ ದ್ವೌ ಹನೂಮದ್ಗರುಡಧ್ವಜೌ॥
ತಂ ದೃಷ್ಟ್ವಾ ರಘುಪತ್ಯಾಖ್ಯತೀರ್ಥಾ ನಿರ್ಜಿತ್ಯ ವಾದಿನಮ್।
ಆಜಹ್ರುಸ್ತೌ ಧ್ವಜೌ ವಾದ್ಯಾಂದೋಲಿಕಾದೀಂಶ್ಚ ತಸ್ಯ ತೇ॥
ಅಥಾಗತಾನ್ ವಾದಿವೃಂದಾನ್ ಜಿತ್ವಾ ಜಿತ್ವಾ ಗುರೂತ್ತಮಾಃ।
ಪುನರ್ಗುರುಸಮೀಪಂ ತೇ ದರ್ಶನಾರ್ಥಮುಪಾಗತಾಃ॥
ಆಗತ್ಯ ರಘುಪತ್ಯಾಖ್ಯಾ ರಘೂತ್ತಮಮುನೀಶ್ವರಾನ್।
ದೃಷ್ಟ್ವಾ ನತ್ವಾ ಧ್ವಜಾದೀಂಸ್ತೇ ಸ್ವಗುರುಭ್ಯಃ ಸಮಾರ್ಪಯನ್॥
ಏವಂ ತೇ ಕತಿಚಿತ್ಕಾಲಂ ಗುರುಸೇವಾಂ ವಿಧಾಯ ಚ।
ತ್ಯಕ್ತ್ವಾ ದೇಹಂ ಹರಿಪದಂ ಜಗ್ಮುರತ್ಯಂತದುರ್ಲಭಮ್॥

– ಪೂರ್ಣಬೋಧಗುರುವಂಶಕಥಾಕಲ್ಪತರು (೧೧/೪೪,೪೫)

## ಶ್ರೀವೇದವ್ಯಾಸತೀರ್ಥರು

ಆ ವೇಳೆಗೆ ಮತ್ತೊಬ್ಬ ಪಂಡಿತರು ಶ್ರೀರಘೂತ್ತಮರ ಬಳಿಗೆ ಬಂದರು ; ಹೆಸರು ಅನಂತವ್ಯಾಸಾಚಾರ್ಯ ; ಶ್ರೇಷ್ಠವಿದ್ವಾಂಸರು ; ಪರಮವಿರಕ್ತರು ; ಸದಾಚಾರದೀಕ್ಷಿತರು. ಅವರ ತಂದೆ ಪಿಲ್ಲೂರ ವಂಶದ ಕೋನೇರಭಟ್ಟರೆಂಬವರು ಹನ್ನೆರಡು ವರ್ಷಗಳ ಕಾಲ ಶ್ರೀವೇದವ್ಯಾಸಮಂತ್ರದ ಪುರಶ್ಚರಣೆಯನ್ನು ನಿರಂತರ ನಡೆಸಿ, ಶ್ರೀವ್ಯಾಸಾನುಗ್ರಹಕ್ಕೆ ವಿಶೇಷವಾಗಿ ಪಾತ್ರರಾಗಿದ್ದವರು. ಸ್ವಲ್ಪ ವಯಸ್ಸೂ ಆಗಿತ್ತು. ಅವರೊಂದಿಗೆ ಅವರ ಅಪಾರಶಿಷ್ಯವೃಂದವೂ ಆಗಮಿಸಿತ್ತು. ತಮ್ಮ ದರ್ಶನಕ್ಕೆಂದು ಆಗಮಿಸಿದ ಅವರನ್ನು ಶ್ರೀರಘೂತ್ತಮರು ತುಂಬಾ ಆದರದಿಂದ ಕಂಡರು. ಅವರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಅನಂತವ್ಯಾಸಾಚಾರ್ಯರು ಕೆಲವುದಿನಗಳು ಅಲ್ಲಿಯೇ ತಂಗಿದ್ದರು. ನಿತ್ಯವೂ ಪಾಠ-ಪ್ರವಚನಕಾಲದಲ್ಲಿ ಅನಂತವ್ಯಾಸಾಚಾರ್ಯರು ತೋರುತ್ತಿದ್ದ ಪ್ರತಿಭೆ, ಸಿದ್ಧಾಂತನಿಷ್ಠೆ ವಿನಯಾದಿಗುಣಗಳನ್ನು ಕಂಡು ಶ್ರೀರಘೂತ್ತಮತೀರ್ಥರು ನಿಶ್ಚಯಿಸಿದರು. "ನಮ್ಮ ಮಹಾಪೀಠದ ಉತ್ತರಾಧಿಕಾರಿಗಳಾಗಲು ಇವರು ನಿಜಕ್ಕೂ ಸರ್ವಥಾ ಅರ್ಹರು". ಮುಂದೊಂದು ದಿನ ತಮ್ಮ ಸಂಕಲ್ಪವನ್ನು ಅವರಿಗೆ ತಿಳಿಸಿಯೂಬಿಟ್ಟರು. ಆ ವೇಳೆಗೆ ಶ್ರೀರಘೂತ್ತಮತೀರ್ಥರಲ್ಲಿ ತಮ್ಮ ಸ್ವರೂಪೋದ್ಧಾರಕಗುರುಗಳನ್ನೇ ಕಂಡಿದ್ದ ಅವರಿಗೆ ಅವರ ಆದೇಶ ಶಿರಸಾಮಾನ್ಯವಾಯಿತು. ಅಂತಹವರ ಕೃಪಾವಿಶೇಷ ತಮ್ಮ ಮೇಲೆ ಬಿದ್ದಿದ್ದು ಜನ್ಮಜನ್ಮಗಳ ಭಾಗ್ಯ ಎಂದು ಸಂಭ್ರಮಪಟ್ಟರು. ಮುಂದೊಂದು ದಿನ ಶ್ರೀವೇದವ್ಯಾಸ-ತೀರ್ಥರೆಂದು ನಾಮಕರಣ ಮಾಡಿ, ಅವರಿಗೆ ಸನ್ಯಾಸವನ್ನು ನೀಡಿದರು; ತಮ್ಮ ಉತ್ತರಾಧಿಕಾರಿಗಳನ್ನಾಗಿ ಪಟ್ಟಾಭಿಷೇಕ ಮಾಡಿದರು. ಅವರು ಮುಂದೆ ಶ್ರೀಜಯತೀರ್ಥಶ್ರೀಚರಣರ ಪದ್ಯಮಾಲಾಕೃತಿಗೆ ವ್ಯಾಖ್ಯಾನುರೂಪವಾದ ಒಂದು ಅಪೂರ್ವಕೃತಿಯನ್ನು ರಚಿಸಿರುವ ಉಲ್ಲೇಖ [೧]ಪೂಜಾಕಲ್ಪಲತಾಕೃತಿಯಲ್ಲಿದೆ.

## ಶ್ರೀವೇದೇಶತೀರ್ಥರು

ಈ ವೇಳೆಗೆ ಮತ್ತೊಂದು ಪ್ರಸಂಗವೂ ನಡೆದಿತ್ತು. ಮಣೂರು ಆ ಕಾಲದ ದೊಡ್ಡ ವಿದ್ವತ್ ಕೇಂದ್ರ. ವಿಶೇಷವಾಗಿ ನ್ಯಾಯಶಾಸ್ತ್ರದಲ್ಲಿ ತಲಸ್ಪರ್ಶಿಪಾಂಡಿತ್ಯದ ಅಪಾರವಿದ್ವಾಂಸರ ತವರು. ಶ್ರೀರಘುನಾಥತೀರ್ಥರು ಮತ್ತು ಶ್ರೀರಘುವರ್ಯತೀರ್ಥರಿಗಂತು ಅತ್ಯಂತಪ್ರಿಯವಾಗಿದ್ದ ವಿದ್ಯಾಕೇಂದ್ರ. ಧ್ರುವನ ಕಾಲದಿಂದಲೂ ಪುಣ್ಯಭೂಮಿ ಎಂಬ ಖ್ಯಾತಿ ಅವರದು. ಧ್ರುವಪ್ರತಿಷ್ಠಿತ ಎನ್ನಲಾಗುವ ಶ್ರೀಚನ್ನಕೇಶವಮೂರ್ತಿಯಿಂದಾಗಿ ಶ್ರೇಷ್ಠಪುಣ್ಯಕ್ಷೇತ್ರವೂ ಆಗಿ, ಪ್ರಸಿದ್ಧವಾದ ಸ್ಥಳ.

ಶ್ರೀನಿವಾಸಾಚಾರ್ಯ(ಭಾಗಪ್ಪಯ್ಯ ಎಂದು ನಾಮಾಂತರ) ಎಂಬ ಒಬ್ಬ ವಟು ಅಲ್ಲಿ ಶ್ರೀರಘೂತ್ತಮರ ಕೃಪಾದೃಷ್ಟಿಗೆ ಪಾತ್ರನಾದ. ಅವನ ಚುರುಕುಬುದ್ಧಿ, ತತ್ತ್ವನಿಷ್ಠೆಗಳಿಂದ

---

೧. ಅತ್ರ ಶ್ರೀವೇದವ್ಯಾಸತೀರ್ಥಶ್ರೀಮಚ್ಚರಣೈಃ ಕೂರ್ಮಾಸನಾದೌ ಉಪವಿಶೇದಿತಿ ಶೇಷಪೂರಣಂ ಕೃತಮ್ ॥ – ಇತಿ (ಪೂಜಾಕಲ್ಪಲತಾ–ಶ್ರೀಜಯತೀರ್ಥರ ಪದ್ಯಮಾಲಾ ಕೃತಿಯ ವ್ಯಾಖ್ಯಾನ)– ಶ್ಲೋ.೧ಳ

ಆಕರ್ಷಿತರಾದ ಅವರು ಅವನ ಪ್ರಾರ್ಥನೆಯಂತೆ ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು. ಶ್ರೀರಘೂತ್ತಮರ ಭಾವವನ್ನು ಅವನು ಗ್ರಹಿಸುತ್ತಿದ್ದ ರೀತಿ ಅವರಿಗೆ ಅಪಾರ ಸಂತೋಷವನ್ನು ನೀಡಿತ್ತು. ಸರ್ವಜ್ಞಶಾಸ್ತ್ರದ ಮರ್ಮವನ್ನೆಲ್ಲ ತುಂಬ ಪ್ರೀತಿಯಿಂದ ಧಾರೆ ಎರೆದರು. ಅವರನ್ನು ಪಾಠಪ್ರವಚನಕಾಲದಲ್ಲಿ ಮಾತ್ರವಲ್ಲದೆ, ಇತರ ಎಲ್ಲ ಕಾಲದಲ್ಲೂ ನೆರಳಿನಂತೆ ಅನುಸರಿಸಿ, ಅವರ ಕೌಶಲಸರ್ವಸ್ವವನ್ನೂ ತನ್ನಲ್ಲಿ ಅಳವಡಿಸಿಕೊಳ್ಳುವ ಅವನ ನಿಷ್ಠೆ ಅವರಿಗೆ ತುಂಬಾ ಪ್ರಿಯವೆನ್ನಿಸಿತು. ಅದರೊಂದಿಗೆ ಅವರಲ್ಲಿ ತುಂಬಿದ್ದ ವಿಷಯವಿರಕ್ತಿ ತುಂಬಾ ಗಮನಾರ್ಹವಾಗಿತ್ತು. ಅದನ್ನೆಲ್ಲ ಗಮನಿಸಿ, ವಿದ್ಯಾಭ್ಯಾಸ ಪೂರೈಸುತ್ತಲೇ ಶ್ರೀವೇದೇಶತೀರ್ಥ ಎಂದು ಹೆಸರಿತ್ತು ಅವರಿಗೆ ಸನ್ಯಾಸಾಶ್ರಮವನ್ನು ನೀಡಿದರು. ಅದರೊಂದಿಗೆ ಅವರಿಗೆ ಸಂಸ್ಥಾನ ಪೂಜೆಯ ಅವಕಾಶವನ್ನೂ ಕಲ್ಪಿಸಿ, ಪರಮಾನುಗ್ರಹವನ್ನೂ ಮಾಡಿದರು. ಆ ವೇಳೆಗೆ ಶ್ರೀವೇದವ್ಯಾಸತೀರ್ಥರೂ ಜೊತೆಗೂಡಿ ಶ್ರೀರಘೂತ್ತಮತೀರ್ಥರಿಗೆ ಮಹದಾನಂದವಾಯಿತು.

ಶ್ರೀವೇದೇಶತೀರ್ಥರಿಗೆ ಪೀಠ ನೀಡುವ ಯೋಚನೆಯನ್ನೂ ಒಮ್ಮೆ ಶ್ರೀರಘೂತ್ತಮತೀರ್ಥರು ಮಾಡಿದ್ದರು. ಅಂತಹ ವಿಶೇಷ ಅರ್ಹತೆಯನ್ನು ಶ್ರೀವೇದೇಶತೀರ್ಥರಲ್ಲಿ ಅವರು ಗುರುತಿಸಿದ್ದರು. ಅದನ್ನು ಅವರಿಗೆ ನೇರವಾಗಿ ತಿಳಿಸಿದ್ದರೂ ಸಹ. ಆದರೆ ಶ್ರೀವೇದೇಶತೀರ್ಥರ ವಿಚಾರ ಬೇರೆ ರೀತಿಯದಾಗಿತ್ತು.

ಆ ವೇಳೆಗೆ ಅವರ ತಮ್ಮ ಯದುಪತ್ಯಾಚಾರ್ಯರು ವಿಶೇಷ ಆಸಕ್ತಿಯಿಂದ ಅವರ ಬಳಿ ಅಧ್ಯಯನ ಮಾಡಲು ಆಗಮಿಸಿದ್ದರು. ಶ್ರೀಪುರಂದರದಾಸರಂತೆ ಮೊದಲು ಚಿನಿವಾರವೃತ್ತಿಯಲ್ಲಿದ್ದ ಅವರು ಶ್ರೀವೇದೇಶತೀರ್ಥರು ಉಪದೇಶಿಸಿದ್ದ ಒಂದು [೧]ಶ್ಲೋಕದ ಪ್ರಭಾವದಿಂದಾಗಿ ಚೋರರ ಆಕ್ರಮಣದಂತಹ ದೊಡ್ಡ ವಿಪತ್ತಿನಿಂದ ಪಾರಾಗಿದ್ದರು. ಅದರಿಂದಾಗಿ ಅವರ ಜೀವನದ ಗತಿ ಬದಲಾಯಿತು. ತಮ್ಮನ್ನು ಅಂತಹ ಆಪತ್ತಿನಿಂದ ಪಾರು ಮಾಡಿದ ಭಗವಂತನನ್ನು ಕಾಣುವ ಕಾತರ ಅವರಲ್ಲಿ ತುಂಬಿತು. ವಿದ್ಯೆಯ ಹೊರತು ಭಗವಂತ ಸಾಕ್ಷಾತ್ಕಾರ ನೀಡಲಾರ ಎಂಬ ಶಾಸ್ತ್ರವಾಣಿ ಅವರನ್ನು ವಿದ್ಯಾವಂತರನ್ನಾಗಲು ಪ್ರೇರಿಸಿತು. ತತ್ಕ್ಷಣ ಅವರು ಪ್ರಯಾಣ ಮಾಡಿದ್ದು ವಿಶ್ವಖ್ಯಾತಿಯ ಕಾಶೀಕ್ಷೇತ್ರಕ್ಕೆ. ಗಂಗೆಯಂತೆ ಜ್ಞಾನಗಂಗೆಯೂ ಸಹಸ್ರಮಾನಗಳಿಂದ ಹರಿದುಬಂದಿರುವುದು ಕಾಶಿಯ ಹಿರಿಮೆ. ಅಲ್ಲಿ ಕೆಲವು ವರ್ಷಗಳಲ್ಲಿ ತರ್ಕ, ವ್ಯಾಕರಣಾದಿಶಾಸ್ತ್ರಗಳನ್ನೆಲ್ಲ ಕರಗತ ಮಾಡಿಕೊಂಡ ಅವರು ವೇದಾಂತವನ್ನು ಅರಿಯುವ ಹಂತವನ್ನು ತಲುಪಿದ್ದರು. ಅದಕ್ಕಾಗಿ ಅವರು ಆಶ್ರಯಿಸಿದ್ದು ತಮ್ಮ ಅಣ್ಣಂದಿರಾದ ಶ್ರೀವೇದೇಶತೀರ್ಥರನ್ನು, ಅವರು ಅಣ್ಣಂದಿರು ಎಂಬ ಅಭಿಮಾನಕ್ಕಿಂತ, ವಿಭೂತಿಪುರುಷರಾದ ಶ್ರೀರಘೂತ್ತಮತೀರ್ಥರ ವಿಶೇಷಾನುಗ್ರಹಕ್ಕೆ ಪಾತ್ರರು ಎಂಬ ಗೌರವ ಅದಕ್ಕೆ ಕಾರಣವಾಯಿತು. ಶ್ರೀವೇದೇಶತೀರ್ಥರಿಗೂ ಹಾಗೆಯೇ. ತಮ್ಮನೆಂಬ ಅಭಿಮಾನಕ್ಕಿಂತ ಪ್ರಾಮಾಣಿಕಜಿಜ್ಞಾಸು ಎಂಬ ಪ್ರೀತಿ ಅವರನ್ನು ಶಿಷ್ಯರನ್ನಾಗಿ ಸ್ವೀಕರಿಸಲು ಕಾರಣವಾಯಿತು.

---

೧. ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ।
ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ॥

ಹಾಗೆ ಪಾಠ ಹೇಳುವ ಕಾರ್ಯವನ್ನು ಪ್ರಾರಂಭಿಸಿಯೂ ಬಿಟ್ಟಿದ್ದರು. ಅವರಿಗೆ ಅದರಲ್ಲೇ ವಿಶೇಷ ಒಲವೂ ಮೂಡಿತ್ತು. ತಾವು ಧಾರೆ ಎರೆಯುವ ವಿದ್ಯೆ ಯದುಪತ್ಯಾಚಾರ್ಯರ ಮೂಲಕ ಶತಮಾನಗಳ ವರೆಗೆ ಪ್ರಸಾರಗೊಳ್ಳುವುದು ಎಂಬ ಸೂಚನೆ ಅವರಿಗೆ ದೊರಕಿತ್ತು.

ಈ ಹಂತದಲ್ಲೇ ಅವರಿಗೆ ಗುರುಗಳಿಂದ ಪೀಠಸ್ವೀಕಾರಕ್ಕೆ ಸೂಚನೆ ಬಂದಿತು. ಒಂದು ಕಡೆ ಮಹಾಪೀಠವನ್ನೇರಿ, ಸಂಸ್ಥಾನಪ್ರತಿಮೆಗಳನ್ನು ಪೂಜಿಸುವ ಸುಯೋಗ ; ಮಹಾನಂದ-ತೀರ್ಥರ ಗ್ರಂಥಗಳನ್ನೇ ಹಗಲಿರುಳೂ ಪಾಠ ಹೇಳುವ ಸುಯೋಗ. ಎರಡೂ ಶ್ರೀಹರಿವಾಯುಗಳಿಗೂ, ತಮ್ಮ ಗುರುಗಳಿಗೂ ಅತ್ಯಂತಪ್ರಿಯವಾದ ಕಾರ್ಯಗಳು. ಮೊದಲಿಗೆ ಆಯ್ಕೆ ಸುಲಭವೆನ್ನಿಸಲಿಲ್ಲ. ಅದರ ಪರಿಹಾರಕ್ಕಾಗಿ ಗುರುಗಳನ್ನೇ ಮೊರೆಹೊಕ್ಕರು. ತಮಗೆ ಶ್ರೀರಾಮಪೂಜೆಗಿಂತ ಶ್ರೀವ್ಯಾಸಪೂಜೆಯ ಬಗ್ಗೆಯೇ ಒಲವು ಹೆಚ್ಚು ಎಂಬ ತಮ್ಮ ಅಂತರಂಗದ ಬಯಕೆಯನ್ನು ನಿರೂಪಿಸಿಕೊಂಡರು : **ಅನುಜೋದಯಮಾಶಾಸೇ ನಾಶಾಸೇ ರಾಮಪೂಜನಮ್ ।**

ಶ್ರೀರಘೂತ್ತಮತೀರ್ಥರದು ಅಪೂರ್ವವ್ಯಕ್ತಿತ್ವ. ಶಾಸ್ತ್ರಪಾಂಡಿತ್ಯದಂತೆ ತಪೋನಿಷ್ಠೆ ತತ್ತ್ವದೀಕ್ಷೆಗಳೆಲ್ಲ ಮೇಳೈಸಿದ್ದ ಪುಣ್ಯಮೂರ್ತಿ ಅವರು. ಶ್ರೀವೇದೇಶತೀರ್ಥರಿಂದ ವ್ಯಾಸಪೂಜೆ ವಿಶೇಷವಾಗಿ ನಡೆದು, ಜ್ಞಾನಪ್ರವಾಹ ಅಚ್ಛಿನ್ನವಾಗಿ ಸಾಗುವುದೆಂಬುದು ಅವರ ದಿವ್ಯದೃಷ್ಟಿಗೆ ಗೋಚರಿಸಿತು. ಅವರು ಪಾಠಪ್ರವಚನಗಳಂತೆ, ಗ್ರಂಥರಚನೆಯಲ್ಲಿಯೂ ತೊಡಗಿದ್ದುದನ್ನು ಗಮನಿಸಿದರು. ಪಾಠಕಾಲದಲ್ಲಿ ತಾವು ಮಾಡುತ್ತಿದ್ದ ವಿಶ್ಲೇಷಣೆಗಳನ್ನೆಲ್ಲ ಗ್ರಂಥರೂಪದಲ್ಲಿ ಸಂಗ್ರಹಿಸುತ್ತಿದ್ದುದನ್ನು ಗುರುತಿಸಿದರು. ಅವೆಲ್ಲ ವಿಶೇಷರೀತಿಯಲ್ಲಿ ಸಾಗಲು ಅವರ ಬಯಕೆಯಂತೆಯೇ ನಡೆಯುವುದು ಸೂಕ್ತವೆಂಬ ನಿರ್ಧಾರಕ್ಕೆ ಬಂದರು. ತಮ್ಮ ನಿರ್ಣಯವನ್ನು ತಿಳಿಸಿದರು. ''ನಿಮ್ಮ ಅಪೇಕ್ಷೆಯಂತೆಯೇ ಆಗಲಿ. ವಿಶೇಷವಾದ ವ್ಯಾಸಪೂಜೆ ನಿಮ್ಮಿಂದ ನಡೆಯಲಿ. ನಿಮ್ಮ ವಾಙ್ಮಯತಪಸ್ಸಿನ ಫಲ ಜಿಜ್ಞಾಸುಗಳಿಗೆ ಲಭಿಸಲಿ'' ಎಂದು ಹರಸಿ, ಬೀಳ್ಕೊಟ್ಟರು.

ತಮ್ಮ ಸಂಕಲ್ಪಕ್ಕೆ ಗುರುಗಳ ಅನುಗ್ರಹದ ರಕ್ಷಾಕವಚ ದೊರೆತದ್ದು ಶ್ರೀವೇದೇಶ- ತೀರ್ಥರ ಸ್ಫೂರ್ತಿಯನ್ನು ನೂರ್ಮಡಿಸಿತು. ಅಂದಿನಿಂದ ಇನ್ನೂ ವಿಶೇಷವಾಗಿ ಸಾಗಿದ ಅವರ ಪಾಠ ಅಪೂರ್ವಫಲ ನೀಡಿತು. ಮಣೂರಿನಲ್ಲಿ ಶ್ರೀರಘುನಾಥತೀರ್ಥರಿಂದ ಸ್ಥಾಪಿತವಾಗಿದ್ದ ವಿದ್ಯಾಪೀಠದ ಕುಲಪತಿಗಳಾಗಿ ಅವರು ಕಾರ್ಯನಿರ್ವಹಿಸತೊಡಗಿದ್ದರು. ಅವರಲ್ಲಿ ಅಧ್ಯಯನ ಮಾಡಿ ಯದುಪತ್ಯಾಚಾರ್ಯರು ದಿಗ್ದಂತಿಪಂಡಿತರಾದರು. ಭಾಗವತ, ನ್ಯಾಯಸುಧೆಗಳಿಗೆ ಅಪೂರ್ವಟಿಪ್ಪಣಿಗಳನ್ನು ರಚಿಸಿದರು. ಗುರುಗಳಿಂದ ಶ್ರವಣಮಾಡಿದ್ದ ಅರ್ಥವಿಶೇಷಗಳನ್ನೆಲ್ಲ ಅಳವಡಿಸಿದ್ದ ಅವರ ಟಿಪ್ಪಣಿಗಳು ವಿದ್ವಾಂಸರಿಗೆ ಹೇಗೋ, ಹಾಗೆ ವಿದ್ಯಾರ್ಥಿಗಳಿಗೂ ಪ್ರಿಯವಾದವು. ಅವರ ಪರಂಪರೆ ಇಂದೂ ಉಳಿದುಬಂದಿದ್ದು ಶತಮಾನಗಳ ವರೆಗೆ ವಿದ್ಯಾಸಂತತಿಯನ್ನು ಬೆಳೆಸಿದ ಕೀರ್ತಿ ಅವರದಾಯಿತು. ಅವರ ಶಿಷ್ಯವರೇಣ್ಯರಾದ ಬಿದರಳ್ಳಿ ಶ್ರೀನಿವಾಸಾಚಾರ್ಯರೆಂಬುವರು ಮಹಾಮಹಿಮರಾದ ಶ್ರೀರಾಘವೇಂದ್ರತೀರ್ಥರಿಂದ 'ತೀರ್ಥ'ಪ್ರಶಸ್ತಿಯನ್ನು ಪಡೆದ ದಾಖಲೆಯ ಟಿಪ್ಪಣಿಕಾರರು

ಎನ್ನಿಸಿದ ಮಹನೀಯರು. ಇದರ ಹಿನ್ನೆಲೆಯಲ್ಲಿದ್ದ ಶ್ರೀರಘೂತ್ತಮತೀರ್ಥರ ಪಾತ್ರ ಅನುಪಮವಾದುದು.

ಶ್ರೀವೇದೇಶತೀರ್ಥರ ಪ್ರವಚನಸಿದ್ಧಿಯಂತೆ, ಗ್ರಂಥರಚನಾಸಿದ್ಧಿಯೂ ಅಪೂರ್ವ-ವಾದುದು. ಗುರುಗಳ ಸರಣಿಯನ್ನು ಅನುಸರಿಸಿ, ಅವರು ಶ್ರೀಮಧ್ವಾಚಾರ್ಯರ ಛಾಂದೋಗ್ಯಭಾಷ್ಯ, ತಲವಕಾರಭಾಷ್ಯ ಹಾಗೂ ಕಾಠಕಭಾಷ್ಯಗಳಿಗೆ ರಚಿಸಿರುವ ಟೀಕೆಗಳು ಅಧ್ಯಯನಪರಂಪರೆಯಲ್ಲಿ ಮಾನ್ಯವಾಗಿವೆ. ಛಾಂದೋಗ್ಯ ಭಾಷ್ಯಕ್ಕಂತೂ ಅವರು ರಚಿಸಿರುವ ಟೀಕೆಯೊಂದೇ ಇಂದು ಅಧ್ಯಯನಪರಂಪರೆಯಲ್ಲಿ ಉಳಿದುಬಂದಿರುವುದು. ಇದರೊಂದಿಗೆ ಶ್ರೀಮಧ್ವಾಚಾರ್ಯರ ಪ್ರಮಾಣಲಕ್ಷಣ, ತತ್ತ್ವೋದ್ಯೋತ, ಕಥಾಲಕ್ಷಣ ಹಾಗೂ ವಿಷ್ಣುತತ್ತ್ವವಿನಿರ್ಣಯಗ್ರಂಥಗಳ ಶ್ರೀಜಯತೀರ್ಥರ ಟೀಕೆಗಳಿಗೂ, ಶ್ರೀಜಯತೀರ್ಥರ ಪ್ರಮಾಣಪದ್ಧತಿಗೂ ಟಿಪ್ಪಣಿಗಳನ್ನು[೧] ರಚಿಸಿದ್ದು, ಅವೆಲ್ಲವೂ ವಿದ್ವನ್ಮಾನ್ಯವಾದ ಅಪೂರ್ವ-ಕೃತಿಗಳಾಗಿವೆ. ಅವರ ಪ್ರಮಾಣಲಕ್ಷಣ ಟಿಪ್ಪಣೀ ಹಾಗೂ ವಿಷ್ಣುತತ್ತ್ವನಿರ್ಣಯಟಿಪ್ಪಣಿಗಳ ಹೊರತು ಇತರ ಎಲ್ಲ ಕೃತಿಗಳೂ ಮುದ್ರಿತವಾಗಿವೆ.

## [೨]ಶ್ರೀತರಂಗಿಣೀ ರಾಮಾಚಾರ್ಯರು

ಶ್ರೀರಘೂತ್ತಮರ ಪಾಠದ ರೀತಿ ತೀರ ವಿಶಿಷ್ಟವಾಗಿತ್ತು. ಆದರಿಂದಾಗಿ ಅದು ಆ ಕಾಲದ ಅನೇಕಪಂಡಿತರನ್ನು ಅವರೆಡೆಗೆ ಆಕರ್ಷಿಸಿತ್ತು. ದೈವಾನುಗ್ರಹದ ಹಿನ್ನೆಲೆಯ ಅವರ ಪಾಠಕೌಶಲ ಅನೇಕ ಪಂಡಿತಶಿರೋಮಣಿಗಳ ದಂಡನ್ನೇ ನಿರ್ಮಿಸಿತು. ಅದರಲ್ಲಿ ಅತ್ಯಂತ ಗಮನಾರ್ಹರಾದವರು[೩] ವಿಶ್ವನಾಥಸೂರಿಗಳ ಪುತ್ರವರೇಣ್ಯರಾದ ಶ್ರೀನಾರಾಯಣಾ-

---

೧. ರಘೂತ್ತಮಗುರುಪ್ರೋಕ್ತೋ ಭಾವೋ ಜಯಮುನೇರಿಹ।
ವೇದೇಶಭಿಕ್ಷುಣಾ ಬಾಲಬೋಧಾಯಾಲ್ಪತಯೇರಿತಃ॥ —ಕಥಾಲಕ್ಷಣಟಿಪ್ಪಣೀ

ಗುರುರಘೂತ್ತಮಯೋಗಿಸುಶಿಕ್ಷಿತೋ ಜಯಮುನೇರಭಿಸಂಧಿರಯಂ ಮಯಾ।
ಪ್ರಕಟಿತೋಽಲ್ಪಬೋಧಹೃದಂಬುಜಸ್ಥಿತರಮಾಪತಿತೃಪ್ತಿಮಭೀಪ್ಸತಾ॥ – ತತ್ತ್ವೋದ್ಯೋತಟಿಪ್ಪಣೀ

ರಘೂತ್ತಮಗುರುರ್ಭೂಯಾನ್ಮಮ ಜ್ಞಾನಾಯ ಸರ್ವದಾ।
ಶ್ರೀಮಧ್ವಶಾಸ್ತ್ರಂ ಸಂಶೋಧ್ಯ ಯಃ ಸಮ್ಯಜ್ಜ್ಞಾನಮಾಪ್ತವಾನ್॥ – ತಲವಕಾರಭಾಷ್ಯಟೀಕಾ

ರಘೂತ್ತಮಮುನೀನ್ ವಿದ್ಯಾಗುರೂನ್ ಪರಗುರೂಂಸ್ತಥಾ।
ವಂದೇ ಶ್ರೀಮಧ್ವಶಾಸ್ತ್ರಾರ್ಥವಿನಿರ್ಮಲಮತೀನಹಮ್॥ – ಛಾಂದೋಗ್ಯಭಾಷ್ಯಟೀಕಾ

೨. ನ್ಯಾಯಾಮೃತಂ ನ್ಯಾಯವಚೋವಿಶೇಷೈಃ ಸುಸಾರಭೂತಂ ಸುಘನತ್ವಮಾಪ್ತಮ್।
ಪ್ರವಾಹಯಾಮಾಸ ತರಂಗಿಣೀಮಿಷಾತ್ ಸ ವ್ಯಾಸರಾಮೋಽಪಿ ತದೀಯಶಿಷ್ಯಃ॥

೩. ಛಂದಃಸಾಂಗಮುರಂಗಮಂಗಲಗವೀಜ್ಯೈಮಿನ್ಯುಪಜ್ಞಂ ಮತಂ
ವ್ಯಾಸೋದಂತಮಬೂಬುಧಚ್ಚ ಸಮಧಾದ್ಯೋ ವಿಶ್ವನಾಥಾಭಿಧಾಮ್।
ಧರ್ಮಂ ವ್ಯಾಕೃತ ಪೂರ್ಣಧೀಕೃತಸದಾಚಾರಸ್ಮೃತಿವ್ಯಾಕೃತಿ-
ವ್ಯಾಜೇನ ಪ್ರಣಮಾಮಿ ತಂ ಪಿತರಮುದ್ಬೋಧಾಯ ಶಬ್ದಾರ್ಥಯೋಃ॥
– ನ್ಯಾಯಾಮೃತತರಂಗಿಣೀ (೫)

ಚಾರ್ಯ ಮತ್ತು ಶ್ರೀರಾಮಾಚಾರ್ಯರು. ಅವರ ತಾತ ವ್ಯಾಸಮುರಾರಿ ಪಂಡಿತರು; ಗೋತ್ರ ಉಪಮನ್ಯು. ವ್ಯಾಸ ಎಂಬ ಉಪನಾಮದ ಅವರ ತಂದೆ ವಿಶ್ವನಾಥಪಂಡಿತರು. ಗೋದಾವರೀತೀರದ [೧]ಅಂಬಾಪುರಿ (ಇಂದಿನ ಅಹಮದ್‌ನಗರ ಜಿಲ್ಲೆಯ ಪುಣತಾಂಬಾ ಬಳಿಯ ಊರು) ಪ್ರಾಂತದವರು. ಅನೇಕ ಉದ್ಗ್ರಂಥಗಳನ್ನು ರಚಿಸಿದ ವಾಙ್ಮಯತಪಸ್ವಿಗಳು. ಅವರು ಶ್ರೀಮದಾಚಾರ್ಯರ ಸದಾಚಾರಸ್ಮೃತಿಗೆ ರಚಿಸಿರುವ ವ್ಯಾಖ್ಯಾನ ನೂರಾರುಪತ್ರಗಳಷ್ಟು ದೊಡ್ಡ ವ್ಯಾಪ್ತಿಯದು. [೨]ನಾರಾಯಣಾರ್ಯರು ಹಿರಿಯಮಗ ; ರಾಮಾಚಾರ್ಯರು ಕಿರಿಯಮಗ. ಅವರಿಬ್ಬರನ್ನೂ ಅವರು ಉನ್ನತವ್ಯಾಸಂಗಕ್ಕಾಗಿ ಶ್ರೀರಘೂತ್ತಮತೀರ್ಥರ ಬಳಿಗೆ ಕಳುಹಿಸಿಕೊಟ್ಟರು. ಅವರ ಅನುಗ್ರಹಕ್ಕೆ ಪಾತ್ರರಾಗಿ ಅವರಿಬ್ಬರೂ ಮಹಾವಿದ್ವಾಂಸರೆಂದು ಖ್ಯಾತರಾದರು. ಶ್ರೇಷ್ಠಟಿಪ್ಪಣೀಕಾರರ ಸಾಲಿನಲ್ಲಿ ಸೇರಿದರು.

ನಾರಾಯಣಾಚಾರ್ಯರು ವೈಶ್ವನಾಥಿನಾರಾಯಣಪಂಡಿತಾಚಾರ್ಯರೆಂದು ಖ್ಯಾತರಾಗಿ ಅದ್ವೈತಕಾಲಾನಲ, ವಿಷ್ಣುತತ್ತ್ವವಿವೇಕ, ಮಧ್ವಮಂತ್ರಾರ್ಥಮಂಜರೀ, ಪ್ರಾಗಭಾವೋಜ್ಜೀವನ ಮೊದಲಾದ ಅನೇಕಗ್ರಂಥಗಳನ್ನು ಬರೆದು, ಮಾನ್ಯರಾಗಿರುವರು. ರಾಮಾಚಾರ್ಯರು ಗುರುಗಳ ಅಪ್ಪಣೆಯಂತೆ ಶ್ರೀವ್ಯಾಸರಾಜರ ನ್ಯಾಯಾಮೃತಕೃತಿಗೆ ಖಂಡನರೂಪವಾಗಿ ರಚಿತವಾಗಿದ್ದ ಮಧುಸೂದನಸರಸ್ವತಿಯ ಅದ್ವೈತಸಿದ್ಧಿ ಎಂಬ ಕೃತಿಯನ್ನು ಅತ್ಯಂತಸಮರ್ಥವಾಗಿ ಉತ್ತರಿಸಿ ನ್ಯಾಯಾಮೃತಮಂಡನಕಾರರೆನ್ನಿಸಿದರು. ನ್ಯಾಯಾಮೃತಕ್ಕೆ ರಚಿತವಾದ ಅವರ ಕೃತಿ **ತರಂಗಿಣೀ.** ಅದರಿಂದಾಗಿ ಅವರು ತರಂಗಿಣೀರಾಮಾಚಾರ್ಯರೆಂದೇ ಖ್ಯಾತರಾದರು. ಶ್ರೀಮದಾಚಾರ್ಯರ ಸದಾಚಾರಸ್ಮೃತಿ, ಯತಿಪ್ರಣವಕಲ್ಪ [೩] ಮತ್ತು ತಂತ್ರಸಾರಸಂಗ್ರಹಗಳಿಗೂ ಅವರು ವ್ಯಾಖ್ಯಾನ ರಚಿಸಿರುವರು.

---

೧. ಸದ್ಯೋಜಾತಜಟಾಜಪಾವನಸರಿದ್ಗೋದಾವರೀತೀರತೋ
ಗವ್ಯೂತಿರ್ವಸತಿಃ ಸತಾಂ ಕುಲವತಾಮಂಬಾಪುರೀ ತತ್ರ ಯೇ ।
ವ್ಯಾಸಾಖ್ಯಾ ಉಪಮನ್ಯುಗೋತ್ರಜಬುಧಾಸ್ತೇಷ್ವಾಸ ಯೋ ಮುದ್ಗಲಃ
ತತ್ರಾಜಜ್ಞತ ಯೇ ಮುರಾರಿಚರಣಾ ವ್ಯಾಸಾಭಿಧಾನಾ ಬುಧಾಃ ॥

– ನ್ಯಾಯಾಮೃತತರಂಗಿಣೀ (ಪರಿಚ್ಛೇದ ೪)

೨. ಪದಾದಿವಿದ್ಯಾಂ ಬಹುವಿನ್ನಿಷದ್ಯಾಮಧ್ಯೈಷಿ ತತ್ತ್ವೈಷಿವರಾದ್ಯತೋಽಹಮ್ ।
ನಮಾಮಿ ತಂ ವ್ಯಾಸಕುಲಾವತಂಸಂ ನಾರಾಯಣಾಚಾರ್ಯಮಥಾಗ್ರಜಂ ಮೇ ॥

– ನ್ಯಾಯಾಮೃತತರಂಗಿಣೀ (೬)

ತೇಭ್ಯೋಽಜಾಯತ ವಿಶ್ವನಾಥ ಇತಿ ಯಃ ಸಜ್ಜ್ಞಾನರತ್ನಾಕರಃ
ತಸ್ಮಾದಾವಿರಭೂತ್ ಸುರದ್ರುಮಯಶಾ ಆಚಾರ್ಯನಾರಾಯಣಃ ।
ರಾಮಾಚಾರ್ಯ ಇತೀರಿತಸ್ತದನುಜೋ ಯಸ್ತತ್ತ್ವವಾದಾಂಬುಧೇಃ
ಆತಾನೀತ್ ಸ ತರಂಗಿಣೀಮಿಹ ಪರಿಚ್ಛೇದಶ್ಚತುರ್ಥೋಽಪಿ ಯಃ ॥

– ನ್ಯಾಯಾಮೃತತರಂಗಿಣೀ (ಪರಿಚ್ಛೇದ ೪)

೩. ಇವರ ಯತಿಪ್ರಣವಕಲ್ಪವ್ಯಾಖ್ಯಾನವು ನಮ್ಮ ಐತರೇಯಪ್ರಕಾಶನದಿಂದ ಅನುವಾದಸಮೇತ ಪ್ರಕಟವಾಗಿದೆ.

# ಶ್ರೀರೊಟ್ಟಿ ವೇಂಕಟಾದ್ರಿಭಟ್ಟರು[1]

ಶ್ರೀರಘೂತ್ತಮರ ಬಳಿ ಅನೇಕವರ್ಷಗಳಿಂದ ಚಿಕ್ಕ ಅಡುಗೆ ಮಾಡುವ ನಿಷ್ಠಾವಂತ ತರುಣನಿದ್ದ. ಉತ್ತಮಸದಾಚಾರಿಯಾಗಿದ್ದ ಆತನಿಗೆ ವಿದ್ಯೆಯ ಗಂಧವೂ ಇರಲಿಲ್ಲ. ತಿಳಿಯುವ ಆಸಕ್ತಿ ವಿಪುಲವಾಗಿದ್ದರೂ, ಕಲಿಯುವ ಅವಕಾಶ ಒದಗಿಬಂದಿರಲಿಲ್ಲ. ಶ್ರದ್ಧೆಯಿಂದ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸುತ್ತಾ ಗುರುಗಳ ವಿಶೇಷಕೃಪೆಗೆ ಪಾತ್ರನಾಗಿದ್ದ. ದಿನಗಳು ಉರುಳುತ್ತಿದ್ದವು. ಗುರುಗಳ ಬಳಿ ಶ್ರದ್ಧೆಯಿಂದ ಪಾಠ ಕೇಳಿ, ನೂರಾರು ಜನ ವಿದ್ವಾಂಸರಾಗಿ ಮರಳುತ್ತಿದ್ದುದನ್ನು ಕಾಣುತ್ತಿದ್ದ ಅವನಿಗೆ ತಾನೂ ಹಾಗೆ ವಿದ್ಯಾವಂತನಾಗುವ ಬಯಕೆ. ಆದರೆ ಏನೂ ಬಾರದ ತಾನು ಹಾಗಾಗಲು ಸಾಧ್ಯವೇ ಎಂಬ ಅಂಜಿಕೆ. ಈ ಗೊಂದಲದಲ್ಲೇ ಮತ್ತೆ ಕೆಲವು ದಿನಗಳು ಉರುಳಿದವು. ಕೊನೆಗೊಮ್ಮೆ ತಡೆಯದಾಯಿತು. ಅದೊಂದು ದಿನ ಧೈರ್ಯ ಮಾಡಿ ಗುರುಗಳನ್ನು ಪ್ರಾರ್ಥಿಸಿಯೇ ಬಿಟ್ಟ : ''ತಮ್ಮ ಕೃಪೆಯಿಂದ ನಾನೂ ಮಧ್ವಶಾಸ್ತ್ರವನ್ನು ಅರಿಯುವಂತಾಗಬೇಕು''. ಆಗಲೇ ಕಲಿಯುವ ವಯಸ್ಸು ಮೀರಿದ್ದ ಚಿಂತೆ ಮನಸ್ಸಿನಲ್ಲಿ ಕೊರೆಯುತ್ತಲೇ ಇತ್ತು. ಗುರುಗಳು ಏನೆನ್ನುವರೊ ಎನ್ನುವ ಆತಂಕಕ್ಕೂ ಮಿತಿ ಇಲ್ಲವಾಗಿತ್ತು. ಆದರೆ ಗುರುಗಳು ನೀಡಿದ ಉತ್ತರ ಅವನಿಗೆ ಉಂಟುಮಾಡಿದ ಆನಂದಾಶ್ಚರ್ಯಗಳಿಗೆ ಇತಿಮಿತಿಗಳೇ ಇರಲಿಲ್ಲ. ''ವೆಂಕಣ್ಣ ! ನಿನ್ನ ಆಸಕ್ತಿ ಅಪೂರ್ವವಾದುದು. ಇಂತಹ ಸದಾಶೆ ಎಲ್ಲರಿಗೂ ಬರುವುದು ಸಾಧ್ಯವಿಲ್ಲ. ಇದಕ್ಕೆ ಸ್ವರೂಪಯೋಗ್ಯತೆಯೊಂದಿಗೆ ಜನ್ಮಜನ್ಮಗಳ ಪುಣ್ಯಪರಿಪಾಕವೂ ಕೂಡಿಬರಬೇಕು. ನಿನಗದು ಒದಗಿದೆ. ಚಿಂತಿಸಬೇಡ ; ನಿನ್ನನ್ನು ಅನುಗ್ರಹಿಸುವೆವು. ನಾಳೆಯಿಂದಲೇ ನಿನ್ನ ಪಾಠ''. ವೆಂಕಣ್ಣನಿಗೆ ಸಂಭ್ರಮವೋ ಸಂಭ್ರಮ ! ಅಂತೂ ಪಾಠ ಕೇಳುವ ಬಹುದಿನಗಳ ಆಸೆ ಪೂರೈಸಿತು. ಗುರುಗಳು ಮುಂದುವರೆಸಿದರು : ''ವೆಂಕಣ್ಣ ! ನಾಳೆಯಿಂದ ನೀನು ಪಾಠ ಕೇಳಲು ಕೂಡಬೇಕಿಲ್ಲ ; ಪಾಠ ಹೇಳಲು ತೊಡಗಬೇಕು. ಇಲ್ಲೆ ನಮ್ಮೆದುರಲ್ಲೆ''. ವೆಂಕಣ್ಣನಿಗೆ ಆನಂದಾಶ್ಚರ್ಯಗಳೊಂದಿಗೆ ಅಂಜಿಕೆಯೂ ಸೇರಿಕೊಂಡಿತು. ''ನಿರಕ್ಷರಕುಕ್ಷಿಯಾದ ತಾನು ಪಾಠ ಕೇಳುವ ಅರ್ಹತೆಯನ್ನೂ ಸರಿಯಾಗಿ ಹೊಂದದಿರುವಾಗ, ಪಾಠ ಹೇಳುವುದೇ? ಗುರುಗಳೇನೂ ಹಾಸ್ಯಕ್ಕಾಗಿ ನುಡಿಯುತ್ತಿಲ್ಲವಷ್ಟೆ!''. ಅವರ ಸ್ವಭಾವವನ್ನು ಚೆನ್ನಾಗಿ ಬಲ್ಲ ಅವನಿಗೆ ಆ ಬಗ್ಗೆ ಗೊಂದಲಕ್ಕೆ ಕಾರಣವೇ ಇರಲಿಲ್ಲ. ಹಾಗಿದ್ದರೆ ಏನಿದರ ಅರ್ಥ? ಗುರುಗಳು ಮತ್ತೂ ಮುಂದುವರೆಸಿದರು : ''ವೆಂಕಣ್ಣ! ನೀನು ಪಾಠ ಹೇಳುವ ಗ್ರಂಥ ಯಾವುದು ಗೊತ್ತೇ? ಅದು ಶ್ರೀಟೀಕಾಕೃತ್ಪಾದರ ಶ್ರೀಮನ್ನ್ಯಾಯಸುಧಾ''. ವೆಂಕಣ್ಣನಿಗೆ ತಾನು ಬೇರೊಂದು ಲೋಕದಲ್ಲೇ ಇರುವ ಅನುಭವ.

---

೧. ರಘೂತ್ತಮಮುನೀನ್ ವಂದೇ ಸರ್ವವಿದ್ಯಾವಿಶಾರದಾನ್ ।
ಯೇಭ್ಯಃ ಶ್ರೀಮಧ್ವಸಿದ್ಧಾಂತಮಹಂ ಸಮ್ಯಗಧೀತವಾನ್ ॥
ಕೃಪಯೇಮಾಂ ಕೃತಿಂ ರೊಟ್ಟೀವೇಂಕಟಾದ್ರಿವಿಪಶ್ಚಿತಃ ।
ವಿದಾಂ ಕುರ್ವಂತು ವಿದ್ವಾಂಸಃ ಕಿಮನ್ಯೈಃ ಕಿತವೈರಿಹ ॥ — ಕರ್ಮನಿರ್ಣಯಟಿಪ್ಪಣೀ

ಮೂರ್ಧಾಗ್ರಣೀರ್ವೇಂಕಟಭಟ್ಟಸೂದಃ ಸೂರ್ಯಗ್ರಗಣ್ಯೋಽಭವದಾತ್ಮವೇದೀ ।
ಯಸ್ಯ ಪ್ರಸಾದಾತ್ ಗುರುಪ್ರಬರ್ಹೋ ವಿದ್ಯಾಮಬಾಧಾಂ ವಿಮಲಾಂ ಪ್ರದದ್ಯಾತ್ ॥

ಗದ್ಗದಿತನಾದ ಅವನಿಗೆ ಗುರುಗಳು ಕರುಣೆಯಿಂದ ನುಡಿದರು : ''ವೆಂಕಣ್ಣ ! ನಾವು ಹೇಳುತ್ತಿರುವುದು ಸತ್ಯ. ನಿನಗಿದ್ದ ಪ್ರಾರಬ್ಧ ಸವೆದಿದೆ. ಜ್ಞಾನದ ಬಾಗಿಲು ತೆರೆದಿದೆ. ಸಂಶಯವೇ ಬೇಡ ; ನೀನಿಂದು ವಿದ್ವಾಂಸನಾಗಿರುವೆ. ಇನ್ನು ಮೇಲೆ ನೀನು ವೆಂಕಣ್ಣನಲ್ಲ ; ವೆಂಕಟಾದ್ರಿಭಟ್ಟ''.

ಮಾರನೆಯ ದಿನ ಗುರುಗಳ ಸಮ್ಮುಖದಲ್ಲಿ ವೆಂಕಟಾದ್ರಿಭಟ್ಟರ ಪಾಠ ನಡೆಯಿತು. ನ್ಯಾಯಸುಧೆಯನ್ನು ಅವರು ವಿವರಿಸಿದ ರೀತಿ ವಿದ್ವನ್ಮಾನ್ಯವಾಗಿತ್ತು. ಹೀಗೆ ರೊಟ್ಟಿ ತಟ್ಟುವವ ಪಾಠ ಹೇಳುವಂತಾದದ್ದು ಗುರುಗಳ ಮಹಿಮೆ. ಎಲ್ಲೋ ರೊಟ್ಟಿ ತಟ್ಟಿದ್ದರೆ, ರಟ್ಟೆ ಸವೆಯಬಹುದಿತ್ತು. ಗುರುಗಳಿಗಾಗಿ, ಶ್ರೀಹರಿವಾಯುಗಳಿಗಾಗಿ ರೊಟ್ಟಿ ತಟ್ಟಿದ ಫಲ ಕಿಟ್ಟಿಗಟ್ಟಿದ ಪ್ರಾರಬ್ಧವನ್ನೇ ಸವೆಸಿತು. 'ಕರ್ಮಣಾ ಜ್ಞಾನಮಾತನೋತಿ' ಎಂಬ ಮಾತಿಗೆ ಶ್ರೇಷ್ಠನಿದರ್ಶನ-ವಾಯಿತು. ಸತ್ಕರ್ಮಾನುಷ್ಠಾನದ ಮುಖ್ಯಫಲ ತತ್ತ್ವಜ್ಞಾನಪ್ರಾಪ್ತಿ ಎಂಬ ಶಾಸ್ತ್ರವಾಣಿಯ ಭಾವ ಇದೇ.

ಉಪನಿಷತ್ತು ಮಹಾಭಾರತಾದಿಗಳನ್ನು ಬಲ್ಲವರಿಗೆ ಇದು ಅಸಹಜವೇನೂ ಅಲ್ಲ. ಛಾಂದೋಗ್ಯದ ಸತ್ಯಕಾಮ ಉಪಕೋಸಲರು, ಮಹಾಭಾರತದ ಉಪಮನ್ಯು, ಉದ್ದಾಲಕ, ವೇದ ಮೊದಲಾದವರು ಗುರ್ವನುಗ್ರಹದಿಂದ ಮರುಕ್ಷಣದಲ್ಲೇ ಅಪರೋಕ್ಷಜ್ಞಾನಿಗಳಾದ ಪ್ರಸಂಗ ಅವುಗಳಲ್ಲಿ ದಾಖಲಾಗಿದೆ[1]. ಅನುಗ್ರಹಸಾಮರ್ಥ್ಯದ ಗುರು, ತತ್ತ್ವಲಾಲಸೆಯ ಶಿಷ್ಯ ಒಂದೆಡೆ ಸೇರಿದಾಗ ಇದು ತೀರ ಸಹಜ. ಅಂತಹ ಅನುಗ್ರಹಸಾಮರ್ಥ್ಯದ ಅಪೂರ್ವಗುರುಗಳು ಎಂಬುದು ಶ್ರೀರಘೂತ್ತಮರ ಹಿರಿಮೆ. ತಮ್ಮ ಗುರುಗಳ ಅನುಗ್ರಹದಿಂದ ಹಾಗೆ ಅಪೂರ್ವಜ್ಞಾನ ಪಡೆದಿದ್ದ ಅವರು, ಹೀಗೆ ಅನುಗ್ರಹಿಸುವ ಮೂಲಕ ಶಿಷ್ಯರೂ ಮಹಾಜ್ಞಾನಿ-ಗಳಾಗುವಂತೆ ಮಾಡಿದ್ದು ಅವರ ವಿಶೇಷ. ಇದೂ ಸಹ ಉಪನಿಷತ್ತಿನ ಸತ್ಯಕಾಮಾದಿಮುನಿಗಳಲ್ಲಿ ಕಂಡುಬಂದಿರುವ ಹಿರಿಮೆಯಾಗಿದೆ.

ಹಾಗೆ ಜ್ಞಾನ ಪಡೆದ ರೊಟ್ಟಿ ವೇಂಕಟಾದ್ರಿಭಟ್ಟರು ಪ್ರವಚನಾಚಾರ್ಯರು ಮಾತ್ರವಲ್ಲದೆ, ಟಿಪ್ಪಣ್ಯಾಚಾರ್ಯರು ಎನ್ನಿಸಿದ್ದು ಮತ್ತೊಂದು ಪವಾಡ. ತತ್ತ್ವಸಂಖ್ಯಾನ, ತತ್ತ್ವೋದ್ಯೋತ, ಕರ್ಮನಿರ್ಣಯ ಕೃತಿಗಳ ಟೀಕೆಗಳಿಗೆ ಅವರು ರಚಿಸಿರುವ ಟಿಪ್ಪಣಿಗಳು ಇಂದೂ ಪಾಠಪ್ರವಚನಪರಂಪರೆಯಲ್ಲೂ ಉಳಿದುಬಂದಿದ್ದು ಅಪೂರ್ವಾರ್ಥದ ಗಣಿಗಳೆನ್ನಿಸಿವೆ. ದಿನತ್ರಯನಿರ್ಣಯವನ್ನು ಕುರಿತಾದ ಅವರ ಕೃತಿಯಂತೂ[2] ಉತ್ತರಾದಿಮಠದ ದಿನತ್ರಯ-ನಿರ್ಣಯಕ್ರಮಕ್ಕೆ ಪ್ರಮುಖ ಆಧಾರಗಳಲ್ಲೊಂದೆನಿಸಿದೆ. ಅದನ್ನು ಶ್ರೀರಘೂತ್ತಮರ ಪ್ರಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರಂತಹ ವಿದ್ವನ್ಮಣಿಗಳು ತಮ್ಮ ಏಕಾದಶೀನಿರ್ಣಯ-ಗ್ರಂಥದಲ್ಲಿ ಉಲ್ಲೇಖಿಸಿರುವುದು[3] ತುಂಬಾ ಗಮನಾರ್ಹವಾದ ಸಂಗತಿ.

---

೧. ಸರ್ವೇ ವೇದಾಸ್ತೇ ಪ್ರತಿಭಾಸ್ಯಂತು, ಸರ್ವಾಣಿ ಧರ್ಮಶಾಸ್ತ್ರಾಣಿ ಚ। – ಮಹಾಭಾರತ

೨. ಇದನ್ನು ಸಮಗ್ರವಾಗಿ ಪರಿಶಿಷ್ಟದಲ್ಲಿ ಕೊಡಲಾಗಿದೆ.

೩. ಹರಿಮಾನಂಚತೀರ್ಥಾರ್ಯಂ ವೇದವ್ಯಾಸಮುನೀನಪಿ।
ನತ್ವಾ ದಿನತ್ರಯಂ ಶಕ್ತ್ಯಾ ಸೂಚ್ಯತೇ ತು ಯಥಾಮತಿ॥

# ಶ್ರೀಆನಂದಭಟ್ಟಾರಕರು[1]

ಆನಂದಭಟ್ಟಾರಕರು ದ್ವೈತವೇದಾಂತದ ಗೃಹಸ್ಥಗ್ರಂಥಕಾರರಲ್ಲಿ ಅಗ್ರಶ್ರೇಣಿಗೆ ಸೇರಿದವರು. ಇವರ ಮೂಲಸ್ಥಾನ ಗೋದಾವರೀತೀರದ ಪುಣ್ಯಸ್ತಂಭಪುರ (ಇಂದಿನ ಮಹಾರಾಷ್ಟ್ರದ ಅಹಮದ್‌ನಗರ ಜಿಲ್ಲೆಯ ಪುಣತಾಂಬಾ ಎಂಬ ಗ್ರಾಮ). ಇವರ ತಂದೆ ತ್ರಿವಿಕ್ರಮಾಚಾರ್ಯರು ; ತಿಮ್ಮಣ್ಣಭಟ್ಟೋಪಾಧ್ಯಾಯರು ಇವರ ಅಣ್ಣ. ಬಾಲ್ಯದಲ್ಲಿ ಹೆಚ್ಚೇನೂ ಓದದಿದ್ದ ಇವರು, ಮುಂದೆ ಕೊಲ್ಹಾಪುರದ ಮಹಾಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡಿ, ಸಿದ್ಧಿ ಪಡೆದು, ಕಾಶಿಯಲ್ಲಿ ಇತರ ಶಾಸ್ತ್ರಗಳನ್ನೂ, ಶ್ರೀರಘೂತ್ತಮತೀರ್ಥರಲ್ಲಿ ಮಧ್ವಶಾಸ್ತ್ರವನ್ನೂ ಓದಿ, ಅನುಪಮವಿದ್ವಾಂಸರೆನ್ನಿಸಿದರು. ಶ್ರೇಷ್ಠವಿದ್ವಾಂಸರಾಗಿ ಮಾತ್ರವಲ್ಲದೆ, ಶ್ರೇಷ್ಠ-ಗ್ರಂಥಕಾರರಾಗಿಯೂ ಅವರು ಪರಂಪರೆಯಲ್ಲಿ ಮಾನ್ಯರಾಗಿರುವರು. 'ಪಾಂಡುರಂಗಿ' ಎಂದು ಖ್ಯಾತವಾಗಿರುವ ಮನೆತನದ ಮೂಲಪುರುಷರು ಇವರೇ. ಅವರು ಶ್ರೀವ್ಯಾಸರಾಜರ ನ್ಯಾಯಾಮೃತಕ್ಕೆ ಮಂಡನರೂಪವಾಗಿ ರಚಿಸಿರುವ [2]ನ್ಯಾಯಾಮೃತಕಂಟಕೋದ್ಧಾರ (ಮಧುಸೂದನ ಸರಸ್ವತಿಯ ಅದ್ವೈತಸಿದ್ಧಿಯ ಖಂಡನೆ)ವು ಅಪೂರ್ವವಾದ ಒಂದು ವಾದಗ್ರಂಥ. ಅವರು ಶ್ರೀವಾದಿರಾಜರ ವಿಶೇಷಾನುಗ್ರಹಕ್ಕೆ ಪಾತ್ರರಾಗಿ ಪಡೆದ ಪುತ್ರರತ್ನವೇ ಮುಂದೆ ಶ್ರೀವಿದ್ಯಾಧೀಶತೀರ್ಥರೆಂದು ಖ್ಯಾತರಾಗಿ, ಶ್ರೀರಘೂತ್ತಮತೀರ್ಥರ ಪ್ರಶಿಷ್ಯರಾಗಿ ಉತ್ತರಾದಿಮಠದ ಪೀಠವನ್ನು ಅಲಂಕರಿಸಿದ ಮಹಾನುಭಾವರು. ಅವರು ವಿದ್ಯೆ ಹಾಗೂ

---

ಅರುಣೋದಯವೇಲಾಯಾಮಿತ್ಯುಕ್ತಿಮನುಸೃತ್ಯ ತು ।
ವಿವೃತಂ ಪಂಡಿತಾಚಾರ್ಯೈಸ್ತದುಕ್ತಿಮನುಸೃತ್ಯ ತು ॥
ವಿವೃತಂ ಕಂಜನಾಭಾರ್ಯೈಸ್ತದುಕ್ತಸ್ಯಾನುಸಾರತಃ ।
ರಘುನಾಥಮುನೀಂದ್ರೈಸ್ತು ಕೃತಂ ವಿಸ್ತರತಸ್ತ್ವಿದಮ್ ॥
ಅತಿಗಂಭೀರವಾಕ್ಯತ್ವಾನ್ನಿರ್ಣಯೋ ನೈವ ಜಾಯತೇ ।
**ರೊಟ್ಟೀವೇಂಕಟಭಟ್ಟೈಸ್ತು** ವಿವೃತಂ ತು ಯಥಾಮತಿ ॥
ಅಸ್ಮದ್ಗುರುಮುಖಾಂಭೋಜನಿಃಸೃತಾಽಪೂರ್ವನಿರ್ಣಯಾತ್ ।
ಸೂಚ್ಯತೇ ತ್ರಿದಿನಂ ಶಕ್ತ್ಯಾ ಮಂದಾನಾಂ ಬೋಧನಾಯ ತು ॥
ಲಿಪ್ತಿಜ್ಞೈರಾರ್ಯಸಿದ್ಧಾಂತಜ್ಞೈಶ್ಚ ಸಮ್ಯಗ್ವಿಚಾರ್ಯ ತು ।
ಅನೇಕಧರ್ಮಶಾಸ್ತ್ರಾಣಿ ಜ್ಞಪ್ತಿವಾಕ್ಯಾನಿ ಚಾದರಾತ್ ॥
ಆಲೋಡ್ಯ ಸುಜನೈಃ ಸಮ್ಯಕ್ ವಿವೃಣೋಮಿ ಯಥಾಮತಿ ॥

— ಶ್ರೀವಿದ್ಯಾಧೀಶತೀರ್ಥಕೃತದಶಮ್ಯಾದಿದಿನತ್ರಯನಿರ್ಣಯ

೧. ಪುಣ್ಯಸ್ತಂಭನಿವಾಸಿಗೌತಮಸರಿತ್ಸ್ನಾನಾಗ್ನಿಹೋತ್ರಾದಿಸತ್-
ಶ್ರೌತಾರ್ಷಾದಿಗುರೂಕ್ತಕರ್ಮನಿಚಯೈಃ ಶ್ರೀಶಪ್ರಪೂಜಾರತಾನ್ ।
ಶ್ರೀಮಧ್ವೀಯಸುಶಾಸ್ತ್ರಕಂಟಕಹರಾನ್ ತದ್ವ್ಯಾಕೃತೌ ಪಂಡಿತಾನ್
ವಂದೇ ವ್ಯಾಪ್ತಸುಶಿಷ್ಯಸಂತತಿಯುತಾನಾನಂದಭಟ್ಟಾರಕಾನ್ ॥ — ವಾಕ್ಯಾರ್ಥರತ್ನಮಾಲಾ

೨. ರಘೂತ್ತಮಾರ್ಯಶಿಷ್ಯೇಣಾನಂದನಾಮ್ನಾ ಯಥಾಮತಿ ।
ಕೃತೋಽಯಂ ಕಂಟಕೋದ್ಧಾರಃ ಪ್ರೀಯತಾಂ ತೇನ ಮಾಧವಃ ॥ — ನ್ಯಾಯಾಮೃತಕಂಟಕೋದ್ಧಾರ

ಪೀಠ ಎರಡರಲ್ಲೂ ಅವರಿಗೆ ಪ್ರಶಿಷ್ಯರೆನ್ನಿಸಿದ್ದು ವಿಶೇಷ. ಅವರು ನ್ಯಾಯಸುಧೆಗೆ ರಚಿಸಿರುವ ವಾಕ್ಯಾರ್ಥಚಂದ್ರಿಕಾ ಅವರನ್ನು ಗ್ರಂಥಕಾರರನ್ನಾಗಿ ಅಮರರನ್ನಾಗಿಸಿರುವ ಮಹೋನ್ನತಕೃತಿ.

★★★★★

# ಗ್ರಂಥರಚನೆ

ಹೀಗೆ ಪಾಠಪ್ರವಚನಪರಂಪರೆಯಲ್ಲಿ ಅಪೂರ್ವಪವಾಡವನ್ನೆಸಗಿದ್ದ ಶ್ರೀರಘೂತ್ತಮರು ಅಪೂರ್ವಗ್ರಂಥಕಾರರಾಗಿಯೂ ಅಪಾರಮನ್ನಣೆಗಳಿಸಿದ್ದಾರೆ.

ಅವರ ಗ್ರಂಥಗಳು ಹೆಚ್ಚಾಗಿ ಭಾವಬೋಧ ಎಂದೇ ಪ್ರಸಿದ್ಧ. ಹೀಗಾಗಿ ಅವರು ಭಾವಬೋಧಕಾರರೆಂದೇ ವಿದ್ವತ್ಪ್ರಪಂಚದಲ್ಲಿ ಖ್ಯಾತರಾಗಿರುವರು.

## ೧. ತತ್ತ್ವಪ್ರಕಾಶಿಕಾಭಾವಬೋಧ (ಗ್ರಂಥಸಂಖ್ಯೆ ೮೧೦೦)

ಇದು ಶ್ರೀಜಯತೀರ್ಥರ ತತ್ತ್ವಪ್ರಕಾಶಿಕೆಗೆ ರಚಿತವಾಗಿರುವ ಟಿಪ್ಪಣೀಗ್ರಂಥ. ತತ್ತ್ವಪ್ರಕಾಶಿಕೆ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯದ ಮೇಲಿನ ಟೀಕಾಗ್ರಂಥ. ಶ್ರೀರಘೂತ್ತಮರು ಈ ಗ್ರಂಥವನ್ನು ರಚಿಸಿರುವ ವೇಳೆಗಾಗಲೆ, ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾ, ಶ್ರೀವಾದಿರಾಜರ ತತ್ತ್ವಪ್ರಕಾಶಿಕಾಗುರ್ವರ್ಥದೀಪಿಕಾ ಎಂಬ ಟಿಪ್ಪಣೀಗ್ರಂಥಗಳು ರಚಿತವಾಗಿದ್ದವು. ಶ್ರೀರಘೂತ್ತಮರದು ಇಂದು ಉಪಲಬ್ಧವಿರುವ ತತ್ತ್ವಪ್ರಕಾಶಿಕಾಟಿಪ್ಪಣಿಗಳಲ್ಲಿ ಪ್ರಾಯಃ ಮೂರನೆಯದು. ಶ್ರೀವಿಜಯೀಂದ್ರರ ತತ್ತ್ವಮಾಣಿಕ್ಯಪೇಟಿಕಾ ಪ್ರಾಯಃ ಇದೇ ಕಾಲದ ರಚನೆ.

ತತ್ತ್ವಪ್ರಕಾಶಿಕೆಗೆ ಶ್ರೀರಘೂತ್ತಮರ ಟಿಪ್ಪಣಿ ನವೀನರೀತಿಯದು. ಮುಖ್ಯವಾಗಿ ಅನು-ವ್ಯಾಖ್ಯಾನದೊಂದಿಗೆ ಭಾಷ್ಯಾರ್ಥವನ್ನು ತತ್ತ್ವಪ್ರಕಾಶಿಕೆಯ ಬೆಳಕಿನಲ್ಲಿ ವಿವೇಚಿಸಿರುವುದು ಇದರ ವೈಶಿಷ್ಟ್ಯ. ಗ್ರಂಥದುದ್ದಕ್ಕೂ ಕಂಡುಬರುವ ಅನುವ್ಯಾಖ್ಯಾನದ ಉಲ್ಲೇಖ ಇದನ್ನು ದೃಢಪಡಿಸುತ್ತದೆ. ಅದರೊಂದಿಗೆ ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕೆಯನ್ನು ಅನೇಕ ಸಲ ಇದರಲ್ಲಿ ಆದರದಿಂದ ಉಲ್ಲೇಖಿಸಲಾಗಿದೆ.

ಕೊನೆಯಲ್ಲಿ ತಾವು ಬರೆದದ್ದೆಲ್ಲ ತಮ್ಮ ಗುರುಗಳಾದ ಶ್ರೀರಘುವರ್ಯಮುನಿಗಳು ತತ್ತ್ವಪ್ರಕಾಶಿಕೆಗೆ ನೀಡಿದ ವಿವರಣೆಯ ಭಾವ ಎಂದಿರುವುದು ಅದರ ಹಿರಿಮೆಯ ಮತ್ತೊಂದು ಮುಖ ಎನ್ನಬಹುದು :

**ರಘುವರ್ಯಗುರುಪ್ರೋಕ್ತೋ ಭಾವೋ ಜಯಮುನೇರ್ಮಯಾ ।**
**ಲಿಖಿತೋ ಮಂದಬೋಧಾರ್ಥಂ ಪ್ರೀಯತಾಂ ಶ್ರೀಪತಿಸ್ತತಃ ॥**

ಈ ಕೃತಿಯಲ್ಲಿ ಶ್ರೀರಘೂತ್ತಮರು ಸುಮಾರು ೫೦ ಅಪೂರ್ವಪ್ರಮಾಣಶ್ಲೋಕಗಳನ್ನು ಉಲ್ಲೇಖಿಸಿರುವುದು ತುಂಬಾ ಗಮನಾರ್ಹ. ಅವು ಉಪಲಬ್ಧವಾದ ಯಾವ ಆಕರಗಳಲ್ಲೂ ದೊರೆಯದ ಅಪೂರ್ವಶ್ಲೋಕಗಳು. ಅವುಗಳಲ್ಲಿ ಕೆಲವು ಪುರಾಣವಾಕ್ಯಗಳಂತಿದ್ದರೆ, ಮತ್ತೆ

ಕೆಲವು ಪ್ರಾಚೀನಗ್ರಂಥಗಳ ಕಾರಿಕೆಗಳಂತಿವೆ. ಕಾರಿಕೆಗಳಂತಿರುವ ವಾಕ್ಯಗಳಂತೂ ಸೂತ್ರ-ಪ್ರಸ್ಥಾನದ ಬಗೆಗಿನ ಪಾಚೀನಟಿಪ್ಪಣೀಗ್ರಂಥ ಅಥವಾ ಸ್ವತಂತ್ರಗ್ರಂಥವೊಂದರ ಬಗ್ಗೆ ಬೆಳಕು ಚೆಲ್ಲುವಂತಿದೆ. ಅವುಗಳನ್ನೆಲ್ಲ ಪರಿಶಿಷ್ಟದಲ್ಲಿ ಕೊಡಲಾಗಿದ್ದು, ಅವುಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯ. ಶ್ರೀರಘೂತ್ತಮರ ಈ ಕೃತಿಯನ್ನು ಶ್ರೀರಾಘವೇಂದ್ರರು ತಮ್ಮ ತತ್ತ್ವಪ್ರಕಾಶಿಕಾ ಭಾವದೀಪಕೃತಿಯಲ್ಲೂ, ಶ್ರೀಜಗನ್ನಾಥತೀರ್ಥರು ತಮ್ಮ ಭಾಷ್ಯದೀಪಿಕೆ-ಯಲ್ಲೂ ಉಲ್ಲೇಖಿಸಿರುವರು. ಪ್ರತಿಪಾದದ ಕೊನೆಯಲ್ಲೂ ಅಧಿಕರಣಗಳ ತದರ್ಥಚಿಂತಾ, ಅಧಿಕರಣಸಂಗ್ರಹ ಹಾಗೂ ಪಾದಪೇಟಿಕೆಗಳನ್ನೂ ನಿರೂಪಿಸಿರುವುದು ಈ ಕೃತಿಯ ಮತ್ತೊಂದು ವಿಶೇಷ. ಇದು ಮುದ್ರಿತ (ಮದ್ರಾಸ್ ಪ್ರಾಚ್ಯ ಕೋಶಾಗಾರ).

## ೨. ಬೃಹದಾರಣ್ಯಕೋಪನಿಷದ್ಭಾಷ್ಯಭಾವಬೋಧ (ಗ್ರಂಥಸಂಖ್ಯೆ ೬೦೦೦)

ಮುದ್ರಿತ (ಟಿ.ಆರ್.ಕೃಷ್ಣಾಚಾರ್ಯ ಕುಂಭಕೋಣ). ದಶೋಪನಿಷತ್ತುಗಳ ಮೇಲೆ ರಚಿತವಾಗಿರುವ ಶ್ರೀಮಧ್ವಭಾಷ್ಯಗಳು ಉಪನಿಷತ್ಪ್ರಪಂಚದ ಮೇಲೆ ಚೆಲ್ಲಿದ ಬೆಳಕು ತೀರ ವಿಶಿಷ್ಟವಾದುದು. ಆ ಮುಂಚಿನ ಯಾವ ಭಾಷ್ಯಗಳೂ ನೀಡದಿದ್ದ ಋಷಿ, ದೇವತೆಗಳ ವಿವರವಂತೂ ಅತ್ಯಂತಗಮನಾರ್ಹ. ಅರ್ಥವಿವರಣೆಯ ದೃಷ್ಟಿಯಲ್ಲಂತೂ ಪ್ರಾಚೀನಕೃತಿಗಳ ಆಧಾರದೊಂದಿಗೆ ಅವರು ನಿರೂಪಿಸಿದ ಉಪನಿಷದ್ರಹಸ್ಯ ಉಪಾಸನೆಯ ಆಂತರ್ಯವನ್ನೇ ತೆರೆದಿಟ್ಟಿತು. ಇಂತಹ ದಶೋಪನಿಷತ್ತುಗಳ ಭಾಷ್ಯಗಳ ಮೇಲೆ ಪ್ರಾಚೀನಟೀಕೆಗಳನ್ನು ನೀಡಿದ ಶ್ರೇಯಸ್ಸು ನಾರಾಯಣಪಂಡಿತರ ಪುತ್ರ ವಾಮನಪಂಡಿತಾಚಾರ್ಯರು ಹಾಗೂ ಶ್ರೀಜಯತೀರ್ಥರ ಸಾಕ್ಷಾಚ್ಛಿಷ್ಯರಾದ ಶ್ರೀವ್ಯಾಸತೀರ್ಥರದು. ಆದರೆ ಐತರೇಯ ಹಾಗೂ ಬೃಹದಾರಣ್ಯಕವೆಂಬ ಎರಡು ದೊಡ್ಡ ಉಪನಿಷತ್ತುಗಳ ಬಗ್ಗೆ ವಾಮನಪಂಡಿತರ ಟೀಕೆಗಳು ಉಪಲಬ್ಧವಾಗಿಲ್ಲ. ಐತರೇಯಭಾಷ್ಯದ ಶ್ರೀವ್ಯಾಸತೀರ್ಥರ ಟೀಕೆಯು ಉಪಲಬ್ಧವಾಗಿಲ್ಲ. ಛಾಂದೋಗ್ಯಭಾಷ್ಯ ಮತ್ತು ಬೃಹದಾರಣ್ಯಕಭಾಷ್ಯಗಳಿಗೆ ಶ್ರೀವ್ಯಾಸತೀರ್ಥರ ಟೀಕೆಗಳು ಉಪಲಬ್ಧವಿದ್ದರೂ ಇನ್ನೂ ಮುದ್ರಿತವಾಗಿಲ್ಲ.

ಇವರೀರ್ವರ ಅನಂತರ ಉಪನಿಷದ್ಭಾಷ್ಯಗಳಿಗೆ ಟೀಕೆಗಳನ್ನು ರಚಿಸಿದ ಹಿರಿಮೆ ಶ್ರೀವಾದಿರಾಜಶ್ರೀಚರಣರದು. ಆದರೆ ಛಾಂದೋಗ್ಯಾದಿ ಮೂರು ದೊಡ್ಡ ಉಪನಿಷತ್ತು-

೧. ಇವುಗಳನ್ನು ಶ್ರೀರಾಘವೇಂದ್ರಸ್ವಾಮಿಗಳು ತಮ್ಮ ತತ್ತ್ವಪ್ರಕಾಶಿಕಾಭಾವದೀಪದಲ್ಲಿ ಉಲ್ಲೇಖಿಸಿ ಅವುಗಳು ಭಾರದ್ವಾಜಸಂಹಿತೆಯ ವಾಕ್ಯಗಳೆಂಬ ಕೆಲವರ ಅಭಿಪ್ರಾಯವನ್ನು ತಿಳಿಸಿರುವರು. ವಿವರಗಳಿಗೆ ನಮ್ಮ 'ಶ್ರೀವ್ಯಾಸಮಧ್ವ ಮಾಸಪತ್ರಿಕೆ' ಮಾರ್ಚ್ ೨೦೦೮ ಸಂಚಿಕೆ ನೋಡಬಹುದು :
ಅತ್ರೈಕೇ ಕಾನಿಚಿದ್ವಚನಾನ್ಯುದಾಹೃತ್ಯ ತದನುರೋಧೇನ ಟೀಕಾಯಾಂ ಶ್ರುತ್ಯರ್ಥೋಕ್ತಿರಿತ್ಯಾಹುಃ । ತಾನಿ ಚಾಚಾರ್ಯೈರ್ನ ಕ್ವಾಪ್ಯುದಾಹೃತಾನೀತಿ ಕೇಚಿನ್ನ ಶ್ರದ್ದಧತೇ । ಅನ್ಯೇ ತ್ವಾಚಾರ್ಯಾ-ನುದಾಹೃತತ್ವೇಽಪಿ ಪಂಚರಾತ್ರಪಂಚಾಧಿಕರಣೇಸೂತ್ರಭಾವವಿವೃತಿಪರಭಾರದ್ವಾಜಸಂಹಿತಾದೌ ಪಠ್ಯ-ಮಾನತ್ವಾದದೋಷ ಇತ್ಯಾಹುಃ ।

ಗಳಿಗೆ ಅವರ ಟೀಕೆಗಳು ಸಹ ಉಪಲಬ್ಧವಿಲ್ಲ. ಈ ಕೊರತೆಯನ್ನು ನೀಗಿಸಿದ ಹಿರಿಮೆ ಶ್ರೀರಘೂತ್ತಮತೀರ್ಥರು ಹಾಗೂ ಅವರ ಶಿಷ್ಯರದು. ಬೃಹದಾರಣ್ಯಭಾಷ್ಯಕ್ಕೆ ಶ್ರೀರಘೂತ್ತಮರು ರಚಿಸಿರುವ ವಿಸ್ತೃತವಾದ ಟೀಕೆ ಬೃಹದಾರಣ್ಯಭಾಷ್ಯಭಾವಬೋಧ ಎಂದೇ ಪ್ರಸಿದ್ಧವಾಗಿದೆ; ಬ್ರಹ್ಮಪ್ರಕಾಶಿಕಾ ಎಂಬುದು ಇದರ ನಾಮಾಂತರ. ರಘೂತ್ತಮರ ಕೃತಿಗಳಲ್ಲಿ ಗಾತ್ರದಲ್ಲಿ ಅತ್ಯಂತ ಬೃಹತ್ತಾದ ಕೃತಿಯೂ ಇದೇ. ಭಾಷ್ಯಾರ್ಥದೊಂದಿಗೆ ಖಂಡಾರ್ಥವನ್ನೂ ನೀಡಿರುವುದು ಇದರ ವೈಶಿಷ್ಟ್ಯ. ಅನೇಕಕಡೆ ಶಾಂಕರಭಾಷ್ಯದ ವಿವರಣೆಯನ್ನು ಉಲ್ಲೇಖಿಸಿ, ನಿರಾಕರಿಸಿ-ರುವುದು ಇದರ ಮತ್ತೊಂದು ಸಾಧನೆ. ಇದರಲ್ಲಿ 'ಗೋಷ್ಠೇ' ಎಂಬುದಕ್ಕೆ (೩/೧) **'ಯಜ್ಞವಾಟಸಮೀಪೇ ಇತಿ ಸ್ವಾಮಿನಃ'** ಎಂದು ತಮ್ಮ ಗುರುಗಳಾದ ಶ್ರೀರಘುವರ್ಯರ ವಿವರಣೆಯನ್ನು ಉಲ್ಲೇಖಿಸಿರುವುದು ಗಮನಾರ್ಹ. ಬೃಹದಾರಣ್ಯಭಾಷ್ಯಕ್ಕೆ ಇಂದೂ ಪ್ರಕಾಶಿತವಾಗಿರುವ ಏಕಮಾತ್ರ ಟೀಕೆ ಎಂಬುದು ಇದರ ಹಿರಿಮೆ. ಇದರ ಉಪಯುಕ್ತತೆಯನ್ನು ಮನಗಂಡ ಇತರರಾರೂ ಪ್ರತ್ಯೇಕಟೀಕೆಯನ್ನು ರಚಿಸುವ ಸಾಹಸಕ್ಕೆ ಕೈಹಾಕಲಿಲ್ಲ ಎಂದು ಭಾವಿಸಬಹುದು. ಅಧ್ಯಯನಪರಂಪರೆಯಲ್ಲಿ ವಿಶೇಷವಾಗಿ ಬಂದಿರುವ ಶ್ರೀರಾಘವೇಂದ್ರ-ಸ್ವಾಮಿಗಳ ಬೃಹದಾರಣ್ಯಕೋಪನಿಷತ್ ಖಂಡಾರ್ಥ ಇದರ ಅನಂತರ ಕಾಲದ ರಚನೆ.

## ೩. ವಿಷ್ಣುತತ್ತ್ವನಿರ್ಣಯಟೀಕಾಭಾವಬೋಧ (ಗ್ರಂಥಸಂಖ್ಯೆ ೧೨೦೦)

ಇದು ಶ್ರೀಜಯತೀರ್ಥರ ವಿಷ್ಣುತತ್ತ್ವನಿರ್ಣಯಟೀಕೆಯ ಮೇಲೆ ರಚಿತವಾಗಿರುವ ಟಿಪ್ಪಣಿ. ವಿಷ್ಣುತತ್ತ್ವನಿರ್ಣಯದ ಮೇಲೆ ಉಪಲಬ್ಧವಿರುವ ಪ್ರಾಚೀನಟಿಪ್ಪಣಿ ಎಂದರೆ ಇದೇ. ವಿಷ್ಣುತತ್ತ್ವನಿರ್ಣಯದ ಮೇಲೆ ರಚಿತವಾಗಿರುವ ಟಿಪ್ಪಣಿಗಳಲ್ಲೆಲ್ಲ ಇದೇ ಅತ್ಯಂತಪ್ರಾಚೀನ. ಶ್ರೀವಿಜಯೀಂದ್ರತೀರ್ಥರ ಟಿಪ್ಪಣಿ ಇದರ ಸಮಕಾಲೀನವಾದ ರಚನೆ. ಮುದ್ರಿತ.

## ೪. ಗೀತಾಭಾಷ್ಯಪ್ರಮೇಯದೀಪಿಕಾಭಾವಬೋಧ

ಶ್ರೀಮಧ್ವಾಚಾರ್ಯರ ಗೀತಾಭಾಷ್ಯಕೃತಿಗೆ ರಚಿತವಾಗಿರುವ ಜಯತೀರ್ಥರ ಟೀಕೆ ಪ್ರಮೇಯದೀಪಿಕಾ. ಅದರ ಮೇಲೆ ಇಂದು ಉಪಲಬ್ಧವಿರುವ ಅತ್ಯಂತ ಪ್ರಾಚೀನ ಟಿಪ್ಪಣಿ ಶ್ರೀರಘೂತ್ತಮತೀರ್ಥರ ಈ ಭಾವಬೋಧ. ಇವರ ಈ ಕೃತಿ ಗೀತಾಭಾಷ್ಯದ ಮೇಲಿನ ಟಿಪ್ಪಣಿ ಗ್ರಂಥಗಳಿಗೆ ನಾಂದಿ ಹಾಡಿತು ಎನ್ನಬಹುದು. ಗಾತ್ರದಲ್ಲಿ ಚಿಕ್ಕದಾಗಿದ್ದರೂ, ಉಪಯುಕ್ತತೆಯ ದೃಷ್ಟಿಯಿಂದ ಮಹತ್ತ್ವಪೂರ್ಣವಾದುದು. ಅನೇಕಕಡೆ ಸಂಬಂಧಿಸಿದ ವ್ಯಾಕರಣಸೂತ್ರಗಳ ವಿವರಣೆಯನ್ನೂ ನೀಡಿರುವರು. ಮಧ್ಯೆ ಮಧ್ಯೆ 'ತತಶ್ಚಾಯಂ ಶ್ಲೋಕಾರ್ಥಃ' ಎಂದು ಕೆಲವು ಶ್ಲೋಕಗಳಿಗೆ ಶ್ಲೋಕಾರ್ಥವನ್ನು ನೀಡಿರುವುದು ಇದರ ವಿಶೇಷ :

ತತಶ್ಚಾಯಂ ಶ್ಲೋಕಾರ್ಥಃ – ಯ ಏನಂ ಜೀವಂ ಸ್ವಾತಂತ್ರ್ಯೇಣ ಹನನಾದಿಕರ್ತಾರಂ ವೇತ್ತಿ, ಯಶ್ಚೈನಂ ಜೀವಂ ಹತಮನಿತ್ಯಂ ವೇತ್ತಿ, ತಾವುಭೌ ತತ್ತ್ವಂ ನ ವಿಜಾನೀತಃ । ಭ್ರಾಂತಾವಿತಿ ಯಾವತ್ । ಕುತೋ ಬಾಧಕಾದಿತಿ ಚೇತ್, ಯತಸ್ತದಧೀನತ್ವೇ ಸತಿ ತತ್ಸದೃಶತ್ವಾ ಖ್ಯಪ್ರತಿಬಿಂಬತ್ವರೂಪಾಸ್ವಾತಂತ್ರ್ಯಾದ್ಧೇತೋಃ 'ನಾಯಂ ಹಂತಿ' ಸ್ವಾತಂತ್ರ್ಯೇಣ ಹನನಾದಿಕರ್ತಾ

ನ ಭವತಿ । ಯತಶ್ಚ ಬಿಂಬನಿತ್ಯತ್ವಾದಿಹೇತುಭ್ಯೋ ನ ಹನ್ಯತೇ – ನ ವಿನಶ್ಯತೀತಿ ಸ್ವಾತಂತ್ರ್ಯ-ನಿತ್ಯತ್ವರೂಪಾರ್ಥಾಭಾವನಿಶ್ಚಯಲಕ್ಷಣಬಾಧೋಽಸ್ತೀತಿ । (೨/೧೯) (ಇದು ಮುದ್ರಿತ. ಶ್ರೀಸತ್ಯಧ್ಯಾನವಿದ್ಯಾಪೀಠ, ಮುಂಬೈ)

## ೫. ಸನ್ನ್ಯಾಯವಿವೃತಿಭಾವಬೋಧ

ಇದು ಶ್ರೀರಘೂತ್ತಮತೀರ್ಥರ ಮತ್ತೊಂದು ಮಹೋನ್ನತಕೃತಿ. ಶ್ರೀಮಧ್ವಾಚಾರ್ಯರ ನ್ಯಾಯವಿವರಣ ಅಥವಾ ಸನ್ನ್ಯಾಯವಿವೃತಿ ಎಂಬ ಕೃತಿಯ ಮೇಲೆ ಶ್ರೀಜಯತೀರ್ಥರು ಟೀಕೆಯನ್ನು ರಚಿಸಿದ್ದರೂ, ಅದು ಸಮಗ್ರವಾಗಿಲ್ಲ. ಅದು ಉಪಲಬ್ಧವಿರುವುದು ಮೊದಲ ಅಧ್ಯಾಯದ ಮೊದಲ ಎರಡುಪಾದ ಹಾಗೂ ಮೂರನೆಯ ಪಾದದ ಆರಂಭದ ಹದಿನಾಲ್ಕು ಅಧಿಕರಣಗಳಿಗೆ ಮಾತ್ರ. ಜಯತೀರ್ಥರ ಹದಿನೆಂಟು ಟೀಕಾಗ್ರಂಥಗಳಲ್ಲಿ ಅಪೂರ್ಣವಾಗಿರುವ ಕೃತಿ ಇದೊಂದೇ. ಅದರ ಉಳಿದಭಾಗವನ್ನು ಪೂರ್ಣಗೊಳಿಸಿದ ಶ್ರೇಯಸ್ಸು ಶ್ರೀರಘೂತ್ತಮ-ತೀರ್ಥರದು. ಶ್ರೀಜಯತೀರ್ಥರ ಕ್ರಮ ಹಾಗೂ ಶೈಲಿಯನ್ನೇ ಅನುಸರಿಸಿ, ಇಡೀಗ್ರಂಥವನ್ನು ವ್ಯಾಖ್ಯಾನಿಸಿದ ವೈಶಿಷ್ಟ್ಯ ಇವರದು. ಇಂದಿಗೂ ನ್ಯಾಯವಿವರಣದ ಮೇಲೆ ಇಷ್ಟೊಂದು ವಿಸ್ತಾರವಾದ ಮತ್ತೊಂದು ಕೃತಿ ರಚಿತವಾಗಿಲ್ಲ ಎಂಬುದು ಈ ಕೃತಿಯ ಮಹತ್ತ್ವಕ್ಕೆ ಹಿಡಿದ ಕನ್ನಡಿ. ಘಟ್ಟದ ಮೇಲಿನ ಗ್ರಂಥಸಂಗ್ರಹಗಳಲ್ಲಿ ಮಾತ್ರವಲ್ಲದೆ, ಉಡುಪಿಯ ಅಷ್ಟಮಠಗಳ ಗ್ರಂಥಾಲಯಗಳಲ್ಲೂ ಇದರ ಹಸ್ತಪ್ರತಿಗಳು ದೊರೆಯುವುದು ಇದರ ಉಪಯುಕ್ತತೆಗೆ ಶ್ರೇಷ್ಠನಿದರ್ಶನ. ನ್ಯಾಯವಿವರಣಟೀಕೆಗೆ ತಾಮ್ರಪರ್ಣಿ ಆನಂದತೀರ್ಥಾಚಾರ್ಯರು ಹಾಗೂ ಏರೀ ಅನಂತಾಚಾರ್ಯರು ಟಿಪ್ಪಣಿಗಳನ್ನು ರಚಿಸಿರುವರು. ಶ್ರೀಜಯತೀರ್ಥರ ಕೃತಿಯನ್ನು ಹೀಗೆ ಪೂರ್ಣಗೊಳಿಸಿದ ಶ್ರೀರಘೂತ್ತಮತೀರ್ಥರ ಕೃತಿ ಸಕಲವಿದ್ವಾಂಸರಿಗೂ ಪೂರ್ಣಸಮ್ಮತ-ವಾಯಿತೆನ್ನಲು ಬೇರಾರೂ ಆ ಕಾರ್ಯದಲ್ಲಿ ಪ್ರವೃತ್ತರಾಗದಿರುವುದೇ ನಿದರ್ಶನ. ಈ ಅರ್ಥದಲ್ಲಿ ಇವರು ಅಭಿನವಟೀಕಾಕೃತ್ಪಾದರು ಎಂಬ ಪ್ರಸಿದ್ಧಿಗೆ ಭಾಜನರಾಗಿರುವರು.

## ೬. ಅನುವ್ಯಾಖ್ಯಾನನ್ಯಾಯಮಾಲಾಬ್ರಹ್ಮಸೂತ್ರಸಂಬಂಧಪ್ರದೀಪ

ಶ್ರೀಮದಾಚಾರ್ಯರು ತಮ್ಮ ಅನುವ್ಯಾಖ್ಯಾನಗ್ರಂಥದಲ್ಲಿ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳನ್ನು ಪ್ರತಿಪಾದಕ್ಕೂ ಪ್ರತ್ಯೇಕವಾಗಿ ಸಂಗ್ರಹಿಸಿರುವರು. ಯುಕ್ತಿಮಾಲಾ ಎಂದೇ ಆ ಭಾಗ ಪ್ರಸಿದ್ಧವಾಗಿದೆ. ಅದಕ್ಕೆ ಅವರೇ ರಚಿಸಿರುವ ಕೃತಿ ನ್ಯಾಯವಿವರಣ ಅಥವಾ ಸನ್ನ್ಯಾಯವಿವೃತಿ. ಅದರ ಹಿನ್ನೆಲೆಯಲ್ಲಿ ಆ ನ್ಯಾಯಗಳ ವಿವರಣೆಯನ್ನೆಲ್ಲ ಸೂತ್ರಾರ್ಥಕ್ಕೆ ಸಂಬಂಧಿಸಿದಂತೆ ಸಂಕ್ಷಿಪ್ತವಾಗಿ ವಿವರಿಸುವುದು ಈ ಕೃತಿಯ ವೈಶಿಷ್ಟ್ಯ. ಗ್ರಂಥಸಂಖ್ಯೆ ೧೨೦೦. ಮುದ್ರಿತ (ಶ್ರೀಸತ್ಯಧ್ಯಾನವಿದ್ಯಾಪೀಠ, ಮುಂಬೈ)

## ೭. ವಿವರಣೋದ್ಧಾರ

ಇದು ಶ್ರೀಟೀಕಾಕೃತ್ಪಾದರು ತತ್ತ್ವಪ್ರಕಾಶಿಕೆಯಲ್ಲಿ ವಿವರಿಸಿರುವ ನ್ಯಾಯವಿವರಣದ ಭಾಗಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಿ, ವಿವರಿಸುವುದು ಈ ಕೃತಿಯ ವಿಷಯ. ಇದಿನ್ನೂ

ಮುದ್ರಿತವಾಗದ ಕೃತಿ. ತಂಜಾವೂರಿನ ಸರಸ್ವತಿಮಹಲ್ ಗ್ರಂಥಾಗಾರದಲ್ಲಿದೆ (Vol. 14, No. 7841). 'ಶ್ರೀಮಜ್ಜಯತೀರ್ಥಚರಣಪ್ರದರ್ಶಿತತತ್ತ್ವಪ್ರಕಾಶಿಕಾಗತನ್ಯಾಯವಿವರಣೋದ್ಧಾರಃ' ಎಂಬುದು ಇದರ ಪೂರ್ಣಹೆಸರು.

## ೮. ತಾರತಮ್ಯಸ್ತೋತ್ರ (ಶ್ಲೋಕ ೧೫)

ಶ್ರೀರಘೂತ್ತಮರು ಬರೆದ ಮತ್ತೊಂದು ಅಪೂರ್ವಕೃತಿ ತಾರತಮ್ಯಸ್ತೋತ್ರ. ದೇವತಾ-ತಾರತಮ್ಯ ಮಧ್ವಸಿದ್ಧಾಂತದ ವಿಶಿಷ್ಟಪ್ರಮೇಯಗಳಲ್ಲೊಂದು. ಹರಿಸರ್ವೋತ್ತಮತ್ವ ಹಾಗೂ ವಾಯುಜೀವೋತ್ತಮತ್ವಗಳ ಹಿರಿಮೆ ಸ್ಫುಟವಾಗಲು ಈ ದೇವತಾತಾರತಮ್ಯದ ಪರಿಜ್ಞಾನ ಅತ್ಯಂತ ಅಗತ್ಯ. ಆದ್ದರಿಂದ ತಾರತಮ್ಯವನ್ನು ಕುರಿತು ಕಾಲಕಾಲಕ್ಕೆ ರಚಿತವಾಗಿವೆ. ಶ್ರೀಮದಾಚಾರ್ಯರು ಅನುವ್ಯಾಖ್ಯಾನ, ತಾತ್ಪರ್ಯನಿರ್ಣಯಾದಿಕೃತಿಗಳಲ್ಲಿ ತಾರತಮ್ಯದ ಬಗ್ಗೆ ನೀಡಿರುವ ವಿವರಗಳನ್ನೆಲ್ಲ ಕ್ರೋಡೀಕರಿಸಿ, ರಚಿತವಾಗಿರುವ ತಾರತಮ್ಯಸ್ತೋತ್ರಗಳಲ್ಲಿ ಶ್ರೀರಘೂತ್ತಮತೀರ್ಥರ ಈ ತಾರತಮ್ಯಸ್ತೋತ್ರವೂ ಒಂದು. ಅತ್ಯಂತಸ್ಫುಟವಾಗಿ ತಾರತಮ್ಯದ ವಿವರಗಳನ್ನು ನೀಡುವ ಈ ಕೃತಿ ನನ್ನ ಸಂಗ್ರಹ (ಶ್ರೀಜಯತೀರ್ಥಸಂಸ್ಕೃತಹಸ್ತಲಿಖಿತ ಗ್ರಂಥಾಲಯ)ದಲ್ಲಿ ಇತ್ತೀಚೆಗೆ ದೊರೆತ ಒಂದು ಅಪೂರ್ವಕೃತಿ. ಇದನ್ನು ಪೂರ್ಣವಾಗಿ ಪರಿಶಿಷ್ಟದಲ್ಲಿ ಕೊಡಲಾಗಿದೆ.

## ೯. ತಿಥಿತ್ರಯವಿನಿರ್ಣಯ

ಏಕಾದಶೀ ಹಾಗೂ ಕೃಷ್ಣಜಯಂತೀವ್ರತಗಳು ಮಧ್ವಸಿದ್ಧಾಂತ ವಿಧಿಸಿರುವ ಅತ್ಯಂತ ಮಹತ್ತ್ವಪೂರ್ಣವಾದ ಎರಡು ಪೂರ್ಣೋಪವಾಸವ್ರತಗಳು. ಏಕಾದಶಿಯ ಬಗ್ಗೆ ವಿವರ-ಗಳನ್ನು ಕೃಷ್ಣಾಮೃತಮಹಾರ್ಣವಗ್ರಂಥದಲ್ಲೂ, ಶ್ರೀಕೃಷ್ಣಜಯಂತಿಯ ಬಗ್ಗೆ ಜಯಂತೀಕಲ್ಪ ಎಂಬ ಗ್ರಂಥದಲ್ಲೂ ಶ್ರೀಮದಾಚಾರ್ಯರು ನೀಡಿರುವರು. ಅದರಲ್ಲಿ ಏಕಾದಶೀ ಆಚರಣೆ ದಶಮೀ, ಏಕಾದಶೀ ಹಾಗೂ ದ್ವಾದಶೀ ದಿನತ್ರಯಗಳ ಆಚರಣೆಯಾಗಿದ್ದು, ದಿನತ್ರಯ-ವ್ರತವೆಂದೇ ಅದು ಪ್ರಸಿದ್ಧ. ಏಕಾದಶೀ ಉಪವಾಸ ಎಂಬುದು ಪ್ರಸಿದ್ಧಪದವಾದರೂ, ಅದರ ಅನುಷ್ಠಾನದ ಬಗ್ಗೆ ವಿಧಿವಿಧಾನಗಳು ವಿಶಿಷ್ಟರೀತಿಯವಾಗಿವೆ. ಏಕಾದಶೀತಿಥಿಯು ಉಪವಾಸಕ್ಕೆ ಅರ್ಹವಾಗಬೇಕಿದ್ದರೆ, ಅದಕ್ಕೆ ದಶಮೀವೇಧ ಇರಕೂಡದು. ಆ ದಶಮೀವೇಧವೂ ಸಹ ಇತರ ತಿಥಿಗಳಂತೆ ಸೂರ್ಯೋದಯವೇಧವಾಗಿರದೆ, ಅರುಣೋದಯವೇಧವಾಗಿದೆ ಎಂಬುದು ಶ್ರೀಮಧ್ವಾಚಾರ್ಯರ ಅಪೂರ್ವನಿರೂಪಣೆ. ಆ ವೇಧಸ್ವರೂಪದ ಬಗ್ಗೆ ವೈಷ್ಣವ-ಮಠಗಳಲ್ಲಿ ನಿರ್ಣಯದ ಭೇದವಿದ್ದು, ಉತ್ತರಾದಿಮಠಕ್ಕೆ ಸಂಬಂಧಿಸಿದಂತೆ ಶ್ರೀರಘೂತ್ತಮರ ನಿರ್ಣಯ ಮೂಲಭೂತವಾದುದು. ಅದರಂತೆ ಶುದ್ಧದ್ವಾದಶಿಯು ತ್ರಯೋದಶಿಗೂ ವ್ಯಾಪಿಸಿದ್ದರೆ, ಮೊದಲದ್ವಾದಶಿಯು ಸಹ ಏಕಾದಶಿಯಂತೆ ಪೂರ್ಣೋಪವಾಸಕ್ಕೆ ವಿಹಿತ-ವಾಗಿದೆ. ಅತಿರಿಕ್ತದ್ವಾದಶಿಯೆಂದು ಅದಕ್ಕೆ ಹೆಸರು. ಅದನ್ನು ಆಚರಿಸದಿದ್ದಲ್ಲಿ ಹನ್ನೆರಡು ದ್ವಾದಶೀವ್ರತಗಳ ಫಲ ವ್ಯರ್ಥ ಎಂಬುದು ಶಾಸ್ತ್ರವಾಣಿ. ಅವೆಲ್ಲವುಗಳ ಬಗ್ಗೆ ಬೆಳಕು ಚೆಲ್ಲುವ ಕೃತಿ ಶ್ರೀರಘೂತ್ತಮತೀರ್ಥರ ತಿಥಿತ್ರಯನಿರ್ಣಯ. ಇದೂ ಸಹ ನನ್ನ ಸಂಗ್ರಹ

(ಶ್ರೀಜಯತೀರ್ಥಸಂಸ್ಕೃತಹಸ್ತಲಿಖಿತ ಗ್ರಂಥಾಲಯ)ದಲ್ಲಿ ದೊರೆತಿದ್ದು ಅದನ್ನೂ ಸಹ ಪೂರ್ಣವಾಗಿ ಪರಿಶಿಷ್ಟದಲ್ಲಿ ಕೊಡಲಾಗಿದೆ.

## ೧೦. ಶ್ರವಣದ್ವಾದಶೀನಿರ್ಣಯ

ಶ್ರವಣೋಪವಾಸವು ಸರ್ವರಿಗೂ ಉಪೋಷ್ಯವಾದ ಶ್ರವಣದ್ವಾದಶೀ ಮತ್ತು ವಿಷ್ಣುಪಂಚಕ ಮಾಡುವವರಿಗೆ ಶ್ರವಣ ಎಂಬುದಾಗಿ ಎರಡು ಬಗೆ. ಅದರಲ್ಲಿ ಶ್ರವಣ-ದ್ವಾದಶಿಯ ಮಹತ್ತ್ವವನ್ನು ಮತ್ತು ಅದರ ಬಗ್ಗೆ ವಿವರಗಳನ್ನು ಶ್ರೀಮದಾಚಾರ್ಯರು ಕೃಷ್ಣಾಮೃತಮಹಾರ್ಣವದಲ್ಲಿ ನೀಡಿರುವರು. ವಿಷ್ಣುಪಂಚಕ, ಶ್ರವಣೋಪವಾಸದ ವಿವರ-ಗಳನ್ನು ಶ್ರೀವಿಷ್ಣುತೀರ್ಥರು ತಮ್ಮ ಸನ್ಯಾಸಪದ್ಧತಿ ಗ್ರಂಥದಲ್ಲೂ ಹಾಗೂ ಶ್ರವಣೋ-ಪವಾಸನಿರ್ಣಯ ಎಂಬ ಪ್ರತ್ಯೇಕಕೃತಿಯಲ್ಲೂ ತಿಳಿಸಿರುವರು. ಇವುಗಳನ್ನು ಆಧರಿಸಿ ಅನಂತರ ಕಾಲದಲ್ಲಿ ಅನೇಕಕೃತಿಗಳ ಇದರ ಬಗ್ಗೆ ರಚಿತವಾಗಿವೆ. ಅವುಗಳಲ್ಲಿ ಶ್ರೀರಘೂತ್ತಮತೀರ್ಥರ ಶ್ರವಣದ್ವಾದಶೀನಿರ್ಣಯ ಕೃತಿಯು ಉತ್ತರಾದಿ ಮಠದ ಶಿಷ್ಯವರ್ಗಕ್ಕೆ ವಿಶೇಷ ಉಪಕಾರವನ್ನು ಮಾಡುವ ಅಪೂರ್ವಕೃತಿ. ಇದರ ಉಲ್ಲೇಖ ಅನಂತರದ ಶ್ರವಣೋಪವಾಸನಿರ್ಣಯಕೃತಿಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ.

## ಸಂಚಾರ

ಪಾಠಪ್ರವಚನಗಳಂತೆ ಸಂಚಾರ ಯತಿಗಳ, ವಿಶೇಷವಾಗಿ ಪೀಠಾಧೀಶರ ಮತ್ತೊಂದು ಪ್ರಮುಖಕರ್ತವ್ಯ; ಪರಿವ್ರಾಜಕ ಎಂಬ ಪೀಠಾಧೀಶರ ಬಿರುದಿಗೆ ಅದೂ ಒಂದು ರೀತಿಯ ಅರ್ಥ. ಹಾಗೆ ದೇಶದುದ್ದಗಲಕ್ಕೂ ಸಂಚರಿಸುವ ಮೂಲಕ ಎಲ್ಲ ಬಗೆಯ ಸಾಧಕರಿಗೂ ವಿಷ್ಣುಸರ್ವೋತ್ತಮತ್ವಾದಿಪ್ರಮೇಯಗಳನ್ನು ಉಪದೇಶಿಸುವ, ಅದನ್ನು ವಿರೋಧಿಸುವ ಜನಗಳಿಗೆ ಸೂಕ್ತ ಉತ್ತರ ನೀಡುವ ಮಹತ್ಕಾರ್ಯವನ್ನು ಸಾಧಿಸಬೇಕಾದದ್ದು ಪೀಠಾಧೀಶರಿಗೆ ವಿಶೇಷವಾಗಿ ವಿಹಿತವಾಗಿರುವ ಕರ್ತವ್ಯ. ಶ್ರೀರಘೂತ್ತಮತೀರ್ಥರು ಹಾಗೆ ವ್ಯಾಪಕವಾಗಿ ಸಂಚಾರ ಮಾಡಿದ ಯತಿಶೇಖರರಲ್ಲಿ ಒಬ್ಬರು. ಮಹಾರಾಷ್ಟ್ರ, ಕರ್ನಾಟಕ ಮಾತ್ರವಲ್ಲದೆ, ತಮಿಳುನಾಡಿನಲ್ಲಿ ಸಹ ಅವರು ವಿಶೇಷವಾಗಿ ಸಂಚರಿಸಿದ್ದವರು. ಉತ್ತರಾದಿಮಠದ ಯತೀಶ್ವರರಲ್ಲಿ ತಮಿಳುನಾಡಿನ ಸಂಪರ್ಕವನ್ನು ವಿಶೇಷವಾಗಿ ಹೊಂದಿದ ಖ್ಯಾತಿಯೂ ಇವರದೇ ಆಗಿದೆ. ಇಂದಿಗೂ ತಮಿಳುನಾಡಿನ ಜನಕ್ಕೆ ಅತಿ ಹೆಚ್ಚು ಪರಿಚಿತವಿರುವ ಉತ್ತರಾದಿ-ಮಠದ ಯತಿಪರಂಪರೆಯ ಪ್ರಮುಖರೆಂದರೆ ಶ್ರೀರಘೂತ್ತಮತೀರ್ಥರೇ ಆಗಿರುವರು.

ಅಷ್ಟಸ್ವಯಂವ್ಯಕ್ತ ಮಹಾಕ್ಷೇತ್ರಗಳಲ್ಲಿ ಪ್ರಥಮವೆನ್ನಿಸಿರುವ ಶ್ರೀರಂಗಕ್ಷೇತ್ರವು ಶ್ರೀರಘೂತ್ತಮರ ತಮಿಳುನಾಡಿನ ಮುಖ್ಯಕಾರ್ಯಕ್ಷೇತ್ರವಾಗಿತ್ತು[೧]. ಅನೇಕವರ್ಷಗಳ ಕಾಲ

---

೧. ರಂಗಕ್ಷೇತ್ರಂ ತತೋ ಗತ್ವಾ ಬಹೂನಬ್ದಾನುವಾಸ ಸಃ।
ಪೌನಃಪುನ್ಯೇನ ಸಚ್ಛಾಸ್ತ್ರಂ ವ್ಯಾಚಷ್ಟಾನಂದತೀರ್ಥಜಮ್ ॥ – ಗುರುಚರ್ಯಾ

ಅಲ್ಲಿ ಅವರು ನೆಲೆಸಿದ್ದುದಾಗಿ ಪ್ರತೀತಿ. ಅವರ ಗ್ರಂಥರತ್ನವಾದ ತತ್ತ್ವಪ್ರಕಾಶಿಕಾಭಾವಬೋಧ ಕೃತಿಯು ರಚಿತವಾದದ್ದು ಈ ಕ್ಷೇತ್ರದಲ್ಲಿಯೇ. ಅವರು ಆ ಕೃತಿಯನ್ನು ಬರೆಯಹೊರಟು, ಅದರ ಸಿದ್ಧಿಗೆಂದು ಒಂದು ವೀರಾಂಜನೇಯಮೂರ್ತಿಯನ್ನು ಅಲ್ಲಿಯ ಮಠದಲ್ಲಿ ಪ್ರತಿಷ್ಠಾಪಿಸಿ, ಗ್ರಂಥರಚನೆಯ ಕಾರ್ಯವನ್ನು ಪ್ರಾರಂಭಿಸಿದರು. ಅದರ ಸನ್ನಿಧಾನದಲ್ಲಿ ಕುಳಿತರೆ, ಅಲ್ಲಿಂದ ಶ್ರೀರಂಗನಾಥದೇವಸ್ಥಾನದ ಗರ್ಭಗುಡಿಯ ಗೋಪುರದ ಮೇಲಿನ ಪರವಾಸುದೇವಮೂರ್ತಿ ನೇರವಾಗಿ ಕಾಣುವುದು ಅದರ ವೈಶಿಷ್ಟ್ಯ. ಹೀಗೆ ಹರಿವಾಯುಗಳ ದರ್ಶನ ಮಾಡುತ್ತಲೇ ರಚಿತವಾದ ಅಮೋಘಕೃತಿ ತತ್ತ್ವಪ್ರಕಾಶಿಕಾಭಾವಬೋಧ. ಆ ಆಂಜನೇಯ- ಪ್ರತೀಕದ ಚಿತ್ರವನ್ನು ಇದರೊಂದಿಗೆ ಕೊಡಲಾಗಿದೆ.

ಶ್ರೀರಘೂತ್ತಮರು ಉಡುಪಿಯಾತ್ರೆಯನ್ನೂ ಪೂರೈಸಿದ್ದ ಪ್ರತೀತಿ ಉಂಟು. ಅವರು ಉಡುಪಿಯಾತ್ರೆಯಿಂದ ಮರಳುವಾಗ ಶಿವಮೊಗ್ಗ ಬಳಿಯ ತುಂಗಾತೀರದ ಮಹಿಷಿಕ್ಷೇತ್ರವನ್ನು ಕಂಡು, ದೈವಪ್ರೇರಣೆಯಂತೆ ಅಲ್ಲೊಂದು ಅಗ್ರಹಾರವನ್ನು ನಿರ್ಮಿಸಿ, ವಿದ್ವಾಂಸರುಗಳನ್ನು ತಂದಿರಿಸಿದರು. ಅದರಿಂದಾಗಿ ಮುಂದೆ ಅದು ಶ್ರೀಸತ್ಯನಾಥ ತೀರ್ಥರು ಮೊದಲಾದವರ ಕಾರ್ಯಕ್ಷೇತ್ರವೆನ್ನಿಸಿತು. ಶ್ರೀಸತ್ಯಸಂಧತೀರ್ಥರ ಕಾಲಕ್ಕಂತೂ ಅದು ಅಪೂರ್ವವಿದ್ವತ್ಕೇಂದ್ರ-ವೆಂದು ಮಾನ್ಯವಾಯಿತು. ಶ್ರೀಸತ್ಯಸಂಧರ ಮೂಲವೃಂದಾವನವೂ ಅಲ್ಲಿಯೇ ಇದೆ. ರಘೂತ್ತಮ ಅಗ್ರಹಾರ ಎಂದು ಇದರ ಪ್ರಾಚೀನ ಹೆಸರು. ಅಲ್ಲಿ ಶ್ರೀರಘೂತ್ತಮರ ಸುಂದರ ಶಿಲಾಪ್ರತೀಕವನ್ನು ಇಂದೂ ಕಾಣಬಹುದು.

## ತಿರುಕ್ಕೋಯಿಲೂರಿನಲ್ಲಿ ಬೃಂದಾವನಪ್ರವೇಶ

ತಿರುಕ್ಕೋಯಿಲೂರು ದಕ್ಷಿಣಭಾರತದ ವೈಷ್ಣವಪುಣ್ಯಕ್ಷೇತ್ರಗಳಲ್ಲೊಂದು. ಮಣಂಪೂಂಡಿ (ವಿವಾಹಮಂಟಪ) ಎಂಬುದು ಅದರ ಪ್ರಾಚೀನ ಹೆಸರು. ಇದು ಇಂದಿನ ತಮಿಳುನಾಡಿನಲ್ಲಿ ಅರುಣಾಚಲ (ತಿರುವಣ್ಣಾಮಲೈ)ದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿರುವ ಪ್ರಸಿದ್ಧ ವೈಷ್ಣವ ಕ್ಷೇತ್ರ. ತ್ರಿವಿಕ್ರಮಾವತಾರವನ್ನು ಮಹಾವಿಷ್ಣುವು ತೋರಿ ಬಲಿಚಕ್ರವರ್ತಿಯನ್ನು ದಮನ ಮಾಡಿದ ಸ್ಥಳ ಎಂದು ಸ್ಥಳಪುರಾಣವು ಇದನ್ನು ವರ್ಣಿಸಿದೆ. ಇಲ್ಲಿ ತ್ರಿವಿಕ್ರಮ ಮೂರ್ತಿಯು ೧೦ ಅಡಿ ಎತ್ತರದ ಭವ್ಯ ಮೂರ್ತಿಯಾಗಿದ್ದು, ವಕ್ಷಃಸ್ಥಲದಲ್ಲಿ ಶ್ರೀವತ್ಸ, ತೋಳುಗಳಲ್ಲಿ ಶಂಖಚಕ್ರಗಳನ್ನೂ ಹೊಂದಿದೆ. ಬ್ರಹ್ಮದೇವರು ಮೇಲ್ಗಡೆಯಲ್ಲಿದ್ದು ಸುತ್ತಲೂ ಶುಕ್ರಾಚಾರ್ಯ ಮೊದಲಾದವರ ವಿಗ್ರಹಗಳಿವೆ. ದಕ್ಷಿಣಪಿನಾಕಿನೀ ತೀರವೆಂಬುದು ಈ ಕ್ಷೇತ್ರದ ಮತ್ತೊಂದು ಹಿರಿಮೆ. ಶ್ರೀವಾದಿರಾಜ ಶ್ರೀಚರಣರು ತಮ್ಮ ತೀರ್ಥಪ್ರಬಂಧ ಕೃತಿಯಲ್ಲಿ ಇದನ್ನು [೧]ವರ್ಣಿಸಿರುವರು. ಸಂಚಾರಕ್ರಮೇಣ ಈ ಕ್ಷೇತ್ರಕ್ಕೆ ಆಗಮಿಸಿದ ಶ್ರೀರಘೂತ್ತಮತೀರ್ಥರು

---

೧. ತ್ರಿವಿಕ್ರಮ ನ ವಿಕ್ರಮಂ ಗಣಯಿತುಂ ಫಣೀ ಶಕ್ನುತೇ
ತವೇಶ ನತವೇಪಥುಪ್ರಶಮನಂ ಪರೇ ಕಿಂ ಪುನಃ।
ಅಜಾಂಡಘನಭಾಂಡಖಂಡನಪಟೀಯಸೀ ಯನ್ಮೃದು-
ಪ್ರದೀಪ್ತನಿಗಮೋಕ್ತಸನ್ನಖಶಿಖಾ ಜಗದ್ವ್ಯಾಪಿನೀ ॥ — ತೀರ್ಥಪ್ರಬಂಧ(೩/೩೮)

ದೈವಪ್ರೇರಣೆಯಂತೆ ಅನೇಕದಿವಸಗಳ ಕಾಲ ಅಲ್ಲಿಯೇ ತಂಗಿದರು. ಅವರಿಂದಾಗಿ ಅಪೂರ್ವವಿದ್ವತ್ಕೇಂದ್ರವೆಂದು ಅದು ಪ್ರಸಿದ್ಧಿಯನ್ನೂ ಪಡೆಯುವಂತಾಯಿತು. ಆ ಪ್ರಾಂತದ ಭಕ್ತವೃಂದ ಬಹಳವಾಗಿ ಪ್ರಾರ್ಥಿಸಿಕೊಂಡಿದ್ದರಿಂದಾಗಿ ಅವರು ಅಲ್ಲಿಯೇ ನೆಲೆಸಿ, ಕೊನೆಗೆ ತಮ್ಮ ಶಿಷ್ಯವರೇಣ್ಯರಾದ ಶ್ರೀವೇದವ್ಯಾಸತೀರ್ಥರಿಗೆ ಸಂಸ್ಥಾನವನ್ನು ಒಪ್ಪಿಸಿ, ಶಾ.ಶ. ೧೫೧೭ನೆಯ ಮನ್ಮಥಸಂವತ್ಸರದ ಪುಷ್ಯಶುಕ್ಲ ಏಕಾದಶಿ (ಜನವರಿ ೧೧, ೧೫೯೬), ಗುರುವಾರದಂದು ಅಲ್ಲಿಯೇ [1]ವೈಕುಂಠಯಾತ್ರೆ ಮಾಡಿದರು.

ಶ್ರೀರಘೂತ್ತಮರ ಮೂಲಬೃಂದಾವನವು ಶ್ರೀಬ್ರಹ್ಮಣ್ಯತೀರ್ಥರು, ಶ್ರೀಶ್ರೀಪಾದ- ರಾಜರು ಮೊದಲಾದ ಮಹನೀಯರ ವೃಂದಾವನಗಳಂತೆ ಮೇಲ್ಛಾವಣಿಯಿಲ್ಲದ ಬೃಂದಾವನ. ಕೆಲವರು ಮೇಲ್ಛಾವಣಿ ಹಾಕಲೆಂದು ಪ್ರಯತ್ನಿಸಿದಾಗ ಅದು ಬೇಡವೆಂದು ಸ್ವಪ್ನಸೂಚನೆಯಾಯಿತಂತೆ. ಅದರ ಉತ್ತರದಿಕ್ಕಿನಲ್ಲಿ ಒಂದು ಹುಣಿಸೆಮರವಿದ್ದು, ಅದರ ಶಾಖೆಗಳ ನೆರಳು ಅದರ ಬೀಳುವ ಮುನ್ನವೇ ಒಣಗಿಹೋಗುವುದು ಇಂದಿಗೂ ಕಂಡುಬರುವ ಆಶ್ಚರ್ಯ. ಅಲ್ಲಿಯ ಪೂಜಾಕ್ರಮವೂ ವಿಶಿಷ್ಟವಾದುದು. ತೋಯಿಸಿದ ಶಾಟಿಯನ್ನು ವೃಂದಾವನಕ್ಕೆ ಉಡಿಸಿ, ಅದು ಒಣಗುವ ಮುನ್ನವೇ ಪೂಜೆ, ನೈವೇದ್ಯ, ಹಸ್ತೋದಕಗಳೆಲ್ಲವನ್ನು ಪೂರೈಸಿ, ಆ ಶಾಟಿಯನ್ನು ವಿಸರ್ಜಿಸುವುದು ಅಲ್ಲಿಯ ಪದ್ಧತಿ. ಪ್ರತಿನಿತ್ಯ ಅಲಂಕರಿಸುವ ಪದ್ಧತಿಯೂ ಆ ವೃಂದಾವನಕ್ಕಿಲ್ಲ. ಆರಾಧನೆಯ ದಿನ ಮಾತ್ರ ತುಂಬಾ ವಿಶೇಷರೀತಿಯ ಪಂಚಾಮೃತಾಭಿಷೇಕ ನಡೆದು, ಅತ್ಯಂತವೈಭವಪೂರ್ಣವಾದ ಪುಷ್ಪಾಲಂಕಾರ ನಡೆಯುವ ಪದ್ಧತಿ ಉಂಟು. ಇಂದಿಗೂ ಶ್ರೀರಘೂತ್ತಮರ ಆರಾಧನಾ ದಿನದಂದು ಸಹಸ್ರಾರು ಭಕ್ತರು ವಿಶೇಷಭಕ್ತಿಯಿಂದ ಪಾಲ್ಗೊಂಡು, ವೈಭವಪೂರ್ಣ ಉತ್ಸವವನ್ನು ಆಚರಿಸುವರು.

## ಮಹಿಮೆಗಳು

ಶ್ರೀರಘೂತ್ತಮರು ಜ್ಞಾನನಿಧಿಗಳಾಗಿದ್ದಂತೆ ತಪೋನಿಧಿಗಳೂ ಆಗಿದ್ದ ಮಹನೀಯರು. ಆರ್ತರ ಪಾಲಿಗೆ ಶ್ರೀವಾದಿರಾಜರಂತೆ ಹಾಗೂ ಶ್ರೀರಾಘವೇಂದ್ರರಂತೆ ಕಲ್ಪವೃಕ್ಷ, ಕಾಮಧೇನು[2] ಎನ್ನಿಸಿರುವ ಹಿರಿಮೆ ಇವರದು.

ತಮ್ಮ ತಪಃಶಕ್ತಿಯಿಂದಾಗಿ ಕಾಲಕಾಲಕ್ಕೆ ಅಪೂರ್ವಮಹಿಮೆಗಳನ್ನು ತೋರುತ್ತಾ ಶ್ರೀಹರಿಯ ಪಾರಮ್ಯವನ್ನು ಸಾರಿದ್ದು ಇವರ ಸಾಧನೆ. ಗ್ರಂಥಗಳಿಂದ ಭಗವನ್ಮಹಿಮೆ ತಿಳಿಯುವುದು

---

೧. ಸಂವತ್ಸರೇ ಮನ್ಮಥಾಖ್ಯೇ ಪುಷ್ಯಮಾಸೇ ಸಿತೇ ದಲೇ ।
ಏಕಾದಶ್ಯಾಂ ಪುಣ್ಯತಮೇ ತ್ರಿಕಲ್ಯಾಖ್ಯಪುರೇ ತದಾ ॥
ವ್ಯಾಸರಾಘವಸೀತಾಂಘ್ರಿಕಂಜಧ್ಯಾನಪರಾಯಣಾಃ ।
ಸಾಧನಾಂತೇ ಭುವಂ ತ್ಯಕ್ತ್ವಾ ವೈಕುಂಠನಗರೀಂ ಯಯುಃ ॥
– ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು (೧೨/೫೯,೬೦)

೨. ಪ್ರಣಮತ್ಕಾಮಧೇನುಂ ಚ ಭಜತ್ಸುರತರೂಪಮಮ್ ।
ಶ್ರೀಭಾವಬೋಧಕೃತ್ಪಾದಚಿಂತಾಮಣಿಮುಪಾಸ್ಮಹೇ ॥

ವಿದ್ವಾಂಸರಿಗೆ ಮಾತ್ರ. ಪಾಮರರಿಗೆ ಭಗವನ್ಮಹಿಮೆಯನ್ನು ಮನಗಾಣಿಸಲು ಪವಾಡಗಳು ಅನಿವಾರ್ಯ. ಅಂತಹ ಪವಾಡಗಳ ಸರಣಿಯನ್ನೇ ಇವರ ಜೀವನದುದ್ದಕ್ಕೂ ಕಾಣಬಹುದು.

೧. ಯುದ್ಧದಲ್ಲಿ ಪರಾಭವಗೊಂಡು, ರಾಜ್ಯಭ್ರಷ್ಟನಾದ ಹಿಂದೂ ಮಾಂಡಲಿಕನೊಬ್ಬ ಇವರ ಮಂತ್ರಾಕ್ಷತೆಯಿಂದಾಗಿ ಪುನಃ ಜಯಶಾಲಿಯಾಗಿ ರಾಜ್ಯವನ್ನು ಹೊಂದಿದ.

೨. ಆನೆಗೊಂದಿ ಪ್ರಾಂತದಲ್ಲಿ ಹುಟ್ಟುಮೂಕನಾದ ಅಂಬಿಗನೊಬ್ಬನು ಪ್ರಾರ್ಥಿಸಿ-ಕೊಂಡಾಗ ಅವನಿಗೆ ಕಮಂಡಲೋದಕವನ್ನು ನೀಡಿ, ಆ ಮೂಲಕ ಮಾತು ಬರುವಂತೆ ಅನುಗ್ರಹಿಸಿದರು. ಇಂದಿಗೂ ಅವರ ವೃಂದಾವನದ ಬಳಿ ಭಕ್ತಿಯಿಂದ ಸೇವಿಸಿ, ಮೂಕತ್ವ ಕಳೆದುಕೊಂಡ ಜನರ ಸಂಖ್ಯೆ ಗಣನೀಯವಾಗಿಯೇ ಇದೆ.

೩. ಒಮ್ಮೆ ಗೃಹಸ್ಥನೊಬ್ಬ ತನ್ನ ವಿಚಿತ್ರಸಂಕಟವೊಂದನ್ನು ನಿರೂಪಿಸಿಕೊಂಡನಂತೆ. ಅವನಿಗೆ ಹುಟ್ಟಿದ ಮಕ್ಕಳೆಲ್ಲ ಸಾಯುವುದು ಒಂದು ಸಂಕಟವಾದರೆ, ಆ ಸಂಕಟ ತಾಳದೆ, ಆತನ ಪತ್ನಿ ಬುದ್ಧಿಭ್ರಮಣೆ ಹೊಂದಿದ್ದು ಮತ್ತೊಂದು ಸಂಕಟವಾಯಿತು. ಗುರುಗಳ ಪ್ರಸಾದ ದೊರೆಯುವುದು ಕಷ್ಟ, ಗುರುಪ್ರಸಾದವಾದ ಮೇಲೆ ಕಾರ್ಯಸಿದ್ಧಿಗೆ ವಿಳಂಬ ಬೇಕಿಲ್ಲ. ಇಲ್ಲಿ ಆದದ್ದು ಹಾಗೆಯೇ. ಅವರು ಅನುಗ್ರಹಿಸಿದ ಮಂತ್ರಾಕ್ಷತೆಯ ಪ್ರಭಾವದಿಂದ ಅವಳ ಬುದ್ಧಿ ಸರಿಹೋದದ್ದು ಮಾತ್ರವಲ್ಲದೆ, ದೀರ್ಘಾಯುಷಿಯಾದ ಪುತ್ರನೂ ಜನಿಸಿದ.

೪. ಹತ್ತೊಂಭತ್ತನೆಯ ಶತಮಾನದಲ್ಲಿ ಅಂಜಲಿಆಚಾರ್ಯರೆಂಬವರು ಪಾರ್ಶ್ವ-ವಾಯುವಿಗೆ ಪೀಡಿತರಾದರು. ಅವರು ತಿರುಪತಿಯಲ್ಲಿ ಶ್ರೀನಿವಾಸನನ್ನು ಸೇವಿಸಿ, ತಿರುಕ್ಕೋಯಿಲೂರಿನತ್ತ ಪ್ರಯಾಣ ಬೆಳೆಸಿದರು. ಮಾರ್ಗಮಧ್ಯದಲ್ಲಿ ಅವರಿಗೆ ಪ್ರಾಣಾಪಾಯದ ಸೂಚನೆ ಒದಗಿ, ಭಕ್ತಿಯಿಂದ ಪ್ರಾರ್ಥಿಸಲು ನಿರ್ವಿಘ್ನವಾಗಿ ಪ್ರಯಾಣ ಸಾಗಿ, ಮುಂದೆ ತಿರುಕ್ಕೋಯಿಲೂರನ್ನು ಸೇರಿ, ಬೃಂದಾವನಸೇವೆಯಿಂದ ಪಾರ್ಶ್ವ-ವಾಯುವಿನಿಂದ ಮುಕ್ತರಾಗಿ, ದೀರ್ಘಕಾಲ ಸಾರ್ಥಕಬಾಳನ್ನು ಬಾಳಿದರು.

೫. ಬ್ರಿಟಿಷರ ಕಾಲದಲ್ಲಿ ಅಧಿಕಾರಿಯೊಬ್ಬ ದಕ್ಷಿಣಪಿನಾಕಿನೀ ಸೇತುವೆಯ ವಿಸ್ತರಣಕಾರ್ಯಕ್ಕಾಗಿ ವೃಂದಾವನದ ಜಾಗವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ, ಅವನಿಗೆ ಸ್ವಪ್ನದರ್ಶನವಿತ್ತು, ಆ ಕ್ರಮವನ್ನು ಅಲ್ಲಿಗೇ ನಿಲ್ಲಿಸಲು ಸೂಚಿಸಿದರಂತೆ. ಬೆರಗಾದ ಅವನು ಹಾಗೆಯೇ ಮಾಡಲು ಸಂತತಿಹೀನನಾಗಿದ್ದ ಅವನು ಪುತ್ರಸಂತಾನ ಪಡೆದು ಸುಖಿಯಾದನಂತೆ.

೬. ಆದರಂತೆ ರಘೂತ್ತಮರನ್ನು ನಿಂದಿಸಿದ ಒಬ್ಬನು ಬಿದ್ದು ನಾಲಿಗೆ ಕತ್ತರಿಸಿಕೊಂಡು ಮೃತ್ಯುಭಯಕ್ಕೆ ತುತ್ತಾಗುವ ಸನ್ನಿವೇಶ ಬಂದಾಗ, ಪಶ್ಚಾತ್ತಾಪಪಟ್ಟು, ವೃಂದಾವನದ ಸೇವೆಗೆ ತೊಡಗಲು, ನಾಲಿಗೆ ಪುನಃ ಅಂಟಿಕೊಂಡು, ಮುಂಚಿನಂತಾದ ಘಟನೆ ತುಂಬಾ ಪ್ರಸಿದ್ಧವಾದುದು.

ಇದರಂತೆ ಇನ್ನೂ ಅನೇಕರು ಕಣ್ಣುಗಳನ್ನು, ಬಾಯಿಯನ್ನು, ಬುದ್ಧಿಯನ್ನು, ಸಂತತಿಯನ್ನು, ಉದ್ಯೋಗವನ್ನು, ಆರೋಗ್ಯವನ್ನು ಪಡೆದುಕೊಂಡು ಕೃತಕೃತ್ಯರಾಗಿ ಬದುಕಿದ ನೂರಾರು ನಿದರ್ಶನಗಳಿವೆ. ಇಂದಿಗೂ ತಿರುಕ್ಕೋಯಿಲೂರಿನ ಎಲ್ಲ ಜಾತಿಯ ಜನರೂ ತಮ್ಮ

ರೋಗರುಜಿನಗಳನ್ನು ಶ್ರೀರಘೂತ್ತಮರ ಸೇವೆಯಿಂದಲೇ ಪರಿಹರಿಸಿಕೊಂಡು ಸುಖಿಗಳಾಗಿ-ರುವುದು ಪ್ರತ್ಯಕ್ಷ ಕಾಣುವ ಅಪೂರ್ವಸಂಗತಿ. ಆ ದನಕರುಗಳ ರೋಗರುಜಿನಗಳೂ ಸಹ ಇವರ ವೃಂದಾವನದ ಪ್ರದಕ್ಷಿಣೆ ಮಾತ್ರದಿಂದಲೇ ಪರಿಹಾರವಾಗುವುದು ಜನಜನಿತವಾದ ಸಂಗತಿ.

## ಶ್ರೀರಘೂತ್ತಮತೀರ್ಥರ ಹಿರಿಮೆ

ದ್ವೈತವೇದಾಂತದ ಮಹಾತಪಸ್ವಿಗಳ ಸಾಲಿನಲ್ಲಿ ಶ್ರೀರಘೂತ್ತಮರು ಕಂಗೊಳಿಸುವರು. ದೈವಿಕವಾಗಿ ಲಭಿಸಿದ ಅಪಾರವೈದುಷ್ಯದಿಂದಾಗಿ ಅವರು ಸಾಧಿಸಿದ ವಿಕ್ರಮ ಅಪೂರ್ವವಾದುದು. ಪಾಠಪ್ರವಚನಪ್ರಾಕಾರದಲ್ಲಿ ಅವರಿಂದ ವಿಶಿಷ್ಟಕ್ರಾಂತಿಯೇ ನಡೆಯಿತು. ಶ್ರೀವೇದವ್ಯಾಸತೀರ್ಥರು, ಶ್ರೀವೇದೇಶತೀರ್ಥರು, ವ್ಯಾಸನಾರಾಯಣಾಚಾರ್ಯರು, ತರಂಗಿಣೀರಾಮಾಚಾರ್ಯರು, ಪಾಂಡುರಂಗಿ ಆನಂದಭಟ್ಟಾರಕರು, ರೊಟ್ಟಿ ವೇಂಕಟಾದ್ರಿ-ಭಟ್ಟರು ಮೊದಲಾದ ದಿಗ್ದಂತಿಪಂಡಿತರು ಅವರ ಗರಡಿಯಲ್ಲಿ ಸಿದ್ಧರಾದ ಮಹಾನುಭಾವರು. ಅವರೆಲ್ಲರ ಶಿಷ್ಯವೃಂದದ ಪರಂಪರೆಯೂ ಸುದೀರ್ಘಕಾಲ ಉಳಿದುಬಂದದ್ದು ಮತ್ತೊಂದು ವಿಶೇಷ.

ಗ್ರಂಥರಚನೆಯಲ್ಲಂತೂ ಶ್ರೀರಘೂತ್ತಮತೀರ್ಥರದು ಮತ್ತೊಂದು ವಿಕ್ರಮ. ಟಿಪ್ಪಣೀ-ಯುಗವನ್ನು ಪ್ರಾರಂಭಿಸಿದ ಕೀರ್ತಿ ಇವರಿಗೆ ಸಲ್ಲಬೇಕು. ಶ್ರೀವ್ಯಾಸರಾಜರ ತಾತ್ಪರ್ಯ-ಚಂದ್ರಿಕಾ, ಮಂದಾರಮಂಜರೀಗ್ರಂಥಗಳು ಟಿಪ್ಪಣೀಗ್ರಂಥಗಳಾದರೂ, ಅವು ಮೂಲತಃ ವಾದಗ್ರಂಥಗಳಾಗಿ ಮಾನ್ಯತೆ ಪಡೆದವು. ಅದರಂತೆ ಮತ್ತೊಬ್ಬ ಮಹಾಗ್ರಂಥಕಾರರಾದ ಶ್ರೀವಾದಿರಾಜರೂ ಸಹ ಯುಕ್ತಿಮಲ್ಲಿಕೆಯಂತಹ ಮೇರುಕೃತಿಯಿಂದಾಗಿ ವಾದಗ್ರಂಥ-ಕಾರರ ಸಾಲಿನಲ್ಲೇ ಸೇರಿದರು. ಶ್ರೀವಿಜಯೀಂದ್ರತೀರ್ಥರು ಟಿಪ್ಪಣೀಕೃತಿಗಳನ್ನು ರಚಿಸಿರುವ-ರಾದರೂ, ಅವರ ಉಪಸಂಹಾರವಿಜಯ, ಭೇದವಿದ್ಯಾವಿಲಾಸ ಮೊದಲಾದ ಕೃತಿಗಳಿಂದಾಗಿ ಮೂಲತಃ ಅನುಪಮಖಂಡನ ಗ್ರಂಥಕಾರರೆನ್ನಿಸಿದರು. ಮುಖ್ಯವಾಗಿ ಟಿಪ್ಪಣೀಗ್ರಂಥಗಳನ್ನೇ ರಚಿಸಿ, ಗ್ರಂಥರಚನೆಯ ಪರಂಪರೆಗೇ ಹೊಸ ಆಯಾಮ ನೀಡಿದ ಹಿರಿಮೆ ಶ್ರೀರಘೂತ್ತಮತೀರ್ಥರದು.

ಭಾವಬೋಧಗಳೆಂದೇ ಖ್ಯಾತವಾದ ಅವರ ಟಿಪ್ಪಣೀಗ್ರಂಥಗಳು ಟೀಕಾಗ್ರಂಥಗಳ ಹಿನ್ನೆಲೆಯಲ್ಲಿ ಮೂಲಗ್ರಂಥಗಳ ಆಶಯವನ್ನು ಗ್ರಹಿಸಲು ನೀಡುವ ನೆರವು ಅದ್ವಿತೀಯವಾದುದು. ಅವರ ಪಂಚಭಾವಬೋಧಕೃತಿಗಳು ಮಧ್ವಸಿದ್ಧಾಂತ ಮುಕ್ಕಣ್ಣನ ಪಂಚಮುಖಗಳಂತೆ ಶೋಭಿಸುತ್ತಿವೆ[1] ಎಂದು ಅವರ ಸ್ತೋತ್ರದಲ್ಲಿ ನಿರೂಪಿತವಾಗಿದೆ. ಸೂತ್ರ, ಗೀತಾ ಮತ್ತು ಉಪನಿಷತ್ತುಗಳೆಂಬ ಪ್ರಸ್ಥಾನತ್ರಯಕ್ಕೂ ಅವರ ಟಿಪ್ಪಣಿಗಳು ಉಪಲಬ್ಧ-

---

೧. ಪಂಚಕೈರ್ಭಾವಬೋಧಾಖ್ಯೈರ್ಗ್ರಂಥೈಃ ಪಂಚಲಸನ್ಮುಖೈಃ।
ತತ್ತ್ವವಿಜ್ಞಾಪಕೈಃ ಸ್ವಾನಾಮುಪಮೇಯಂ ಪಿನಾಕಿನಾ ॥

ವಿರುವುದು ತುಂಬಾ ಗಮನಾರ್ಹ. ಅವರ ವಿಷ್ಣುತತ್ತ್ವನಿರ್ಣಯಭಾವಬೋಧ ಪ್ರಕರಣ-ಗ್ರಂಥಗಳ ಟಿಪ್ಪಣೀರಚನೆಯ ಪರಂಪರೆಗೇ ನಾಂದಿ ಹಾಡಿತು. ಅವರ ಮೇಲ್ಪಂಕ್ತಿಯಲ್ಲಿ ಸಾಗಿದ ಅವರ ಪ್ರಮುಖಶಿಷ್ಯರೆಲ್ಲರೂ, ಪಾಠಪ್ರವಚನಗಳಲ್ಲಿ ಹೇಗೋ, ಹಾಗೆ ಗ್ರಂಥರಚನೆಯಲ್ಲೂ ಅಪಾರವಾದ ಕಾಣಿಕೆ ಸಲ್ಲಿಸಿದರು. ಇದರಿಂದಾಗಿ ಅವರ ಶಿಷ್ಯಪ್ರಶಿಷ್ಯರು ಮೊದಲಾದ ಶಿಷ್ಯಪರಂಪರೆಯನ್ನೇ ಟಿಪ್ಪಣ್ಯಾಚಾರ್ಯರನ್ನಾಗಿ ಮಾಡಿದ ಖ್ಯಾತಿ ಅವರದು. ಅವರ ಸ್ತೋತ್ರದಿಂದ ತಿಳಿದುಬರುವಂತೆ ಅವರ ಆಕೃತಿಯೂ ತುಂಬಾ ಮನೋಹರ-ವಾದದ್ದು[೧].

ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾಗ್ರಂಥದ ಹಿರಿಮೆಯನ್ನು ಮೊದಲ ಬಾರಿಗೆ ಗುರುತಿಸಿ, ಅದನ್ನು ತಮ್ಮ ತತ್ತ್ವಪ್ರಕಾಶಿಕಾಭಾವಬೋಧದಲ್ಲಿ ಉಲ್ಲೇಖಿಸುವ ಮೂಲಕ ಅದರ ಮಹತ್ತ್ವದ ಅರಿವು ವಿದ್ವತ್ಪ್ರಪಂಚಕ್ಕೆ ಆಗಲು ಕಾರಣರಾದವರಲ್ಲಿ ಪ್ರಥಮರು ಎಂಬುದು ಸಹ ಇವರ ವೈಶಿಷ್ಟ್ಯ. ಇದರಿಂದ ವ್ಯಕ್ತವಾಗುವ ಇವರ ವಿದ್ಯಾಪಕ್ಷಪಾತ ಅನುಪಮವಾದುದು. ಚಂದ್ರಿಕೆಯನ್ನು ಉಲ್ಲೇಖಿಸುತ್ತಲೇ ಸೂತ್ರ, ಭಾಷ್ಯ ಹಾಗೂ ಟೀಕೆಗಳ ಚಿಂತನೆಯ ಬಗ್ಗೆ[೨]ಹೊಸಹೊಳವುಗಳನ್ನು ನೀಡಿದ್ದು ಇವರ ಮತ್ತೊಂದು ಸಾಧನೆ.

ಮಠದ ಆಡಳಿತಕ್ಕೆ ತಮ್ಮ ಗುರುಗಳ ಆದೇಶದಂತೆ ಹೊಸರೂಪವನ್ನಿತ್ತಿದ್ದು ಸಹ ಇವರ ಸಾಧನೆಯೇ. ಅಪಾರ ತಪಃಶಕ್ತಿಯಿಂದ ಆರ್ತರನ್ನು ಉದ್ಧರಿಸುತ್ತಾ ಮಾಡಿದ ಸಂಚಾರ-ಕಾರ್ಯವೂ ವಿಶೇಷರೀತಿಯಲ್ಲಿ ಲೋಕೋಪಕಾರಕ್ಕೆ ಕಾರಣವಾಯಿತು.

ಇಂತಹ ಮಹಾಮಹಿಮರ ಸ್ಮರಣೆ, ಗ್ರಂಥಗಳ ಅಧ್ಯಯನ ಜಿಜ್ಞಾಸುವಿನ ಬಾಳಿಗೆ ಬೆಳಕಾಗುವುದರಲ್ಲಿ ಅಚ್ಚರಿಯೇನಿಲ್ಲ.

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

---

೧. ಉದ್ಯನ್ಮಾರ್ತಂಡಸಂಕಾಶಂ ದಂಡಮಾಲಾಕಮಂಡಲೂನ್ ।
ಧರಂ ಕೌಪೀನಸೂತ್ರಂ ಚ ಸೀತಾರಾಘವಮಾನಸಮ್ ॥

೨. **ತಾತ್ಪರ್ಯಚಂದ್ರಿಕಾಯಾಂ** ತು ಸಮಾನಾಧಿಕರಣಾನಾಂ ವೇದಾಧ್ಯಯನಾಶ್ರಮಾದಿವಿಷ್ಣುಪಾದೈಕ-ಸಂಶ್ರಯತ್ವಾದೀನಾಂ ಮಧ್ಯೇ ಯಸ್ಯ ಶಮಾದಿವಿಷ್ಣುಪಾದೈಕಸಂಶ್ರಯತ್ವಾದಿಕೇಽಪ್ರಚುರೇಽ-ಧ್ಯಯನಂ ಪ್ರಚುರಂ ಸೋಽಧಮಃ । ಯಸ್ಯ ವಿಷ್ಣುಪಾದೈಕಸಂಶ್ರಯತ್ವಾದಿಕಮೇವಾಪ್ರಚುರ-ಮಧ್ಯಯನಶಮಾದಿಕೇ ಪ್ರಚುರೇ ಸ ಮಧ್ಯಮಃ । ಯಸ್ಯ ತು ವಿಷ್ಣುಪದೈಕಸಂಶ್ರಯತ್ವಾದಿಕಂ ಪ್ರಚುರಮಧ್ಯಯನಶಮನಾದಿಕೇ ತ್ವಪ್ರಚುರೇ ಸ ಉತ್ತಮ ಇತ್ಯರ್ಥ ಇತ್ಯುಕ್ತಮ್ ॥

– ತತ್ತ್ವಪ್ರಕಾಶಿಕಾಭಾವಬೋಧ (೧/೧/೧)

ಪರಿಶಿಷ್ಟ - ೧

# ತಾರತಮ್ಯಸ್ತೋತ್ರಮ್

ಸರ್ವೋತ್ತಮೋ ವಿಷ್ಣುರಥ ಶ್ರೀಸ್ತತೋ ಬ್ರಹ್ಮಮಾರುತೌ ।
ಅಥ ವಾಣೀ ಭಾರತೀ ಚ ತತಃ ಶೇಷವಿಪೇಶ್ವರಾಃ ॥೧॥

ಅನಂತರಂ ಜಾಂಬವತೀ ಕಾಲಿಂದೀ ಲಕ್ಷಣಾ ತಥಾ ।
ನೀಲಾ ಭದ್ರಾ ಮಿತ್ರವಿಂದಾ ಷಟ್‌ಸ್ತ್ರಿಯಃ ಶಾರ್ಙ್ಗಧನ್ವನಃ ॥೨॥

ಉತೋಮಾ ವಾರುಣೀ ವೀಶಪತ್ನ್ಯಥೇಂದ್ರಮನೋಭವೌ ।
ಅಥಾಹಂಕಾರಿಕಪ್ರಾಣೋಽಥಾನಿರುದ್ಧಬೃಹಸ್ಪತೀ ॥೩॥

ಸ್ವಾಯಂಭುವೋ ರತಿರ್ದಕ್ಷಃ ಶಚ್ಯುತ ಪ್ರವಹಸ್ತಥಾ ।
ಶತರೂಪಾ ಚಂದ್ರಸೂರ್ಯೌ ಯಮೋಽಥ ವರುಣಸ್ತತಃ ॥೪॥

ನಾರದೋ ಭೃಗುರ್ವಹ್ನಿಃ ಪ್ರಸೂತಿಸ್ತದನಂತರಮ್ ।
ವಿಶ್ವಾಮಿತ್ರೋ ವಸಿಷ್ಠೋಽತ್ರಿರ್ಮರೀಚಿಃ ಪುಲಹಃ ಕ್ರತುಃ ॥೫॥

ಪುಲಸ್ತ್ಯಾಂಗಿರಸೌ ಸೂರ್ಯಸೂನುರ್ಮರುತಃ ಪರಮ್ ।
ಪ್ರಾವಹೀ ನಿರ್ಋತಿರ್ಮಿತ್ರಸ್ತಾರೋತಾಶ್ವಿಗಣೇಶ್ವರಃ ॥೬॥

ಋಭವಶ್ಚ ತ್ರಯೋ ವಿಶ್ವೇದೇವಾ ರುದ್ರಾಸ್ತಥಾ ದಶ ।
ದ್ಯಾವಾಪೃಥಿವ್ಯಾವುಕ್ತಾನ್ಯೇ ಷಡಾದಿತ್ಯಾಃ ಪ್ರಕೀರ್ತಿತಾಃ ॥೭॥

ಏಕಾದಶಾನ್ಯೇ ಮನವ ಉಕ್ತೇಭ್ಯಃ ಪಿತೃಸಪ್ತಕಮ್ ।
ಚ್ಯವನಶ್ಚ ಪೃಥೂಚಥ್ಯೌ ಪ್ರಿಯವ್ರತಮುಖಾಃ ಶತಮ್ ॥೮॥

ಉಕ್ತಾನ್ಯದಿಂದ್ರಷಟ್ಕಂ ಚ ಗಂಧರ್ವಾಷ್ಟಕಮುತ್ತಮಮ್ ।
ಶಶಬಿಂದುಃ ಕಾರ್ತವೀರ್ಯಬಲ್ಯಾದ್ಯಾಃ ಕರ್ಮದೇವತಾಃ ॥೯॥

ಪ್ರಹ್ಲಾದೋಽಥ ವಿರಾಡ್ಗಂಗೇ ಸಂಜ್ಞಾಪರ್ಜನ್ಯಶ್ಯಾಮಲಾಃ ।
ರೋಹಿಣ್ಯನಂತರಂ ಸ್ವಾಹಾ ತತೋ ಜಲಪತಿರ್ಬುಧಃ ॥೧೦॥

ಅಥೋಷಾಶ್ಚಾಶ್ವಿಭಾರ್ಯಾಽತಃ ಪೃಥಿವ್ಯಾತ್ಮಾ ಶನೈಶ್ಚರಃ ।
ಅಥ ಕರ್ಮಾಧಿಪಃ ಪ್ರೋಕ್ತಃ ಪುಷ್ಕರಸ್ತದನಂತರಮ್ ॥೧೧॥

ಗಂಧರ್ವಾಸ್ತುಂಬುರುಮುಖಾಃ ಶತಮಪ್ಸರಸಃ ಶತಮ್ ।
ಉರ್ವಶೀಪ್ರಮುಖಾ ವಹ್ನಿಪುತ್ರಾ ಆಜಾನದೇವತಾಃ ॥೧೨॥

ಋಷೀಣಾಂ ನವತಿಶ್ಚಾತಃ ಶತೋನಶತಕೋಟಯಃ ।
ಋಷಯೋ ದೇವಗಂಧರ್ವಾಃ ಶತೋನಾಪ್ಸರಸಸ್ತತಃ ॥೧೩॥

ಪ್ರೋಕ್ತಾ ಮನುಷ್ಯಗಂಧರ್ವಾಸ್ತತೋಽನ್ಯೇ ಚಕ್ರವರ್ತಿನಃ ।
ಪುಣ್ಯಶ್ಲೋಕಾಶ್ಚ ರಾಜಾನಸ್ತತ ಉತ್ತಮಮಾನುಷಾಃ ॥೧೪॥

ಇತ್ಯೇತತ್ ತಾರತಮ್ಯಂ ಯೋ ಜಾನೀಯಾದಥವಾ ಪಠೇತ್ ।
ತಸ್ಮೈ ಶ್ರದ್ದಧತೇ ವಿಷ್ಣುಃ ಪ್ರೀಯತೇ ಭಗವಾನ್ ಪರಃ ॥೧೫॥

॥ ಇತಿ ಶ್ರೀಮದ್ರಘುವರ್ಯತೀರ್ಥಪೂಜ್ಯಪಾದಶಿಷ್ಯರಘೂತ್ತಮಯತಿಕೃತ ತಾರತಮ್ಯಸ್ತೋತ್ರಮ್ ॥

★★★★★

